# ಸಿದ್ಧಗಂಗಾ

ಸಂಪುಟ–27. ಸಂಚಿಕೆ–11. ನವಂಬರ್–1991.

ತತ್ವವಿರೋಧ, ಧರ್ಮವಿರೋಧ, ದೈವವಿರೋಧ, ಆತ್ಮವಿರೋಧಗಳ ಮಧ್ಯೆ ಬಾಳುತ್ತಿದ್ದೇವೆ. ಹಿರಿಯರು ಕೊಟ್ಟು ಹೋಗಿರುವ ತತ್ವಾನುಸರಣೆಯಿಂದ, ಮಾನವೀಯತೆಯೇ ಧರ್ಮದ ನೈಜಸ್ವರೂಪವೆಂಬ ನಿಶ್ಚಿತಜ್ಞಾನದಿಂದ, ದೈವೀಶಕ್ತಿಯ ಒಂದು ಕಿರು ಉಪಕರಣ ನಾನು ಎಂಬ ನಮ್ರ ಭಾವನೆಯಿಂದ, ಮಾತು ಮನ ಮೈಗಳ ಮಧ್ಯೆ ಅಂತರ ಬರದಂತೆ ಬಾಳುವುದನ್ನು ಕಲಿತಾಗ ಮಾತ್ರ ಜೀವನವನ್ನು ಪವಿತ್ರ ಪ್ರಸಾದವೆಂದು ಕಂಡು ಕೊಂಡಂತಾಗುತ್ತದೆ.

.... ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

## "ಸಿದ್ಧಗಂಗಾ" ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

1359 ಶ್ರೀ ಎಸ್. ಎಂ. ಬಾಲಿ, ಕಂಟ್ರಾಕ್ಟರ್, ಹುಣಸಗಿ, ಗುಲ್ಬರ್ಗ ಜಿಲ್ಲೆ.

1360 ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರೌಢಶಾಲೆ, ಹುಣಸಗಿ, ಗುಲ್ಬರ್ಗ ಜಿಲ್ಲೆ

1361 ಶ್ರೀ ಎಸ್. ವೀರಭದ್ರಯ್ಯ, ಶಿಕ್ಷಕರು,
ಹೊಸಹಳ್ಳಿ ಪಾಳ್ಯ, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.

1362 ಶ್ರೀಮತಿ ಕೆ.ಎಸ್. ಶಾಂತಕುಮಾರಿ, D/o ಶ್ರೀ ಕೆ. ವಿ. ರುದ್ರೇಶಯ್ಯ
ಅಮರ ಜ್ಯೋತಿ ನಗರ, ವಿಜಯನಗರ, ಬೆಂಗಳೂರು - 40

1363 ಶ್ರೀ ಪಿ. ನಾಗರಾಜ್, S/o ಶ್ರೀ ಪುಟ್ಟಚನ್ನಯ್ಯ,
ಜಯನಗರ, ಬೆಂಗಳೂರು – 11.

1364 ಶ್ರೀ ಜಿ. ರಾಜಶೇಖರಯ್ಯ, ವೆಂಕಟಪ್ಪ ಗಾರ್ಡನ್,
ಜಯನಗರ, ಬೆಂಗಳೂರು – 82

1365 ಶ್ರೀ ಚನ್ನಬಸವಯ್ಯ, ಶ್ರೀ ಬಸವೇಶ್ವರ ನಗರ, ಬೆಂಗಳೂರು – 79

1366 ಶ್ರೀ ಕೆ ಬಿ. ಶಿವಗಂಗಣ್ಣ, ನಾಸರಹಳ್ಳಿ,
ಬಸವೇಶ್ವರ ನಗರ, ಬೆಂಗಳೂರು - 79

1367 ಶ್ರೀ ಹೆಚ್.ಎಸ್. ಶಿವರುದ್ರಯ್ಯ, ಶಿಕ್ಷಕರು, ಪುರುಷನಹಳ್ಳಿ,
ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

1368 ಶ್ರೀ ಬಸವರಾಜಪ್ಪ, ಲಕ್ಷ್ಮೀಪುರ, ಬೆಂಗಳೂರು ಉತ್ತರ ತಾಲ್ಲೂಕು

1369 ಶ್ರೀ ಕೆ.ಪಿ. ಚಂದ್ರಶೇಖರಯ್ಯ, ಶಿಕ್ಷಕರು, ಕದರನಹಳ್ಳಿ,
ಬೆಂಗಳೂರು ಉತ್ತರ ತಾಲ್ಲೂಕು.

1370 ಶ್ರೀ ಕೆ. ವೀರಭದ್ರಯ್ಯ, ರೇಷ್ಮೆ ಗ್ರೈನೇಜ್, ದೇವನಹಳ್ಳಿ, ಬೆಂಗಳೂರು ಜಿಲ್ಲೆ.

1371 ಶ್ರೀ ಬಿ. ಎಸ್. ಸೋಮಶೇಖರಯ್ಯ, ಶಿಕ್ಷಕರು, ಸಿದ್ಧಗಂಗಾ ಪ್ರೌಢಶಾಲೆ,
ದೊಡ್ಡಗುಣಿ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ.

1372 ಶ್ರೀಮತಿ ಗೌರಮ್ಮ, W/o ಚಂದ್ರಣ್ಣ, ಶಿರಗನಹಳ್ಳಿ,
ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ – 27. ಸಂಚಿಕೆ – 11. ನವಂಬರ್ 1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ಹಾಲು ಹಾಲಾಹಲವ ಸಮಭಾವದಿ ನೀಸವಿದೆ
ಲಿಂಗಜಂಗಮ ಲೀಲೆ ನಡೆಸಿದೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

  

ಬೇಕು - ಬೇಡಗಳೆಲ್ಲ ಸಮರೂಪ ತವಪದಕೆ
ನಾಕ - ನರಕಗಳೆಂಬ ಸುಳಿವಿಲ್ಲ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

  

ನಾಮರೂಪ ಕ್ರೀ ಕಳಾಪಾತೀತ ಗುರುವೆ
ವ್ಯೋಮ ಮೂರುತಿ ದಿವ್ಯತೇಜವೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
| --- | --- | --- |
| * ಶ್ರೀವಾಣಿ | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | | 8 |
| * ಸಂಪಾದಕೀಯ | | 9 |
| * ಬಸವತತ್ತ್ವ ರತ್ನಾಕರ-7 | ಮೋಟಗಿ ಮಲ್ಲಿಕಾರ್ಜುನ | 11 |
| * ವಿಶ್ವಶಾಂತಿಗೆ ಭಾರತದ ಕೊಡುಗೆ | ಎಂ. ಬಿ. ಸದಾಶಿವಯ್ಯ | 17 |
| * ಬಸವಣ್ಣನವರ ದೃಷ್ಟಿಯಲ್ಲಿ ಸಮಾನತೆ | | 23 |
| * ಇತಿಹಾಸಕಾರ ಪಾದ್ರಿ ಹೆರಾಸ್ | ಎಂ.ಎ. ಊರ್ಮಿಳಾದೇವಿ | 26 |
| * ಪ್ರಕಾಂಡ ಪಂಡಿತ ಪ್ರೊ॥ ಕೆ. ವೆಂಕಟರಾಮಪ್ಪ | ಕವಿತಾಕೃಷ್ಣ | 28 |
| * ವಿಜ್ಞಾನ ಮತ್ತು ಆಧ್ಯಾತ್ಮ | ಎಚ್. ಎಸ್. ನರಸಿಂಹಜೀಯರ್ | 30 |
| * ಅಶಾಶ್ವತಾನಿ ಜಗತ್ | ರಾಜೇಂದ್ರಶಿಶು | 32 |
| * ಕ್ರೋಮಿಯಂ ಬಗ್ಗೆ ನೀವೆಷ್ಟು ಬಲ್ಲಿರಿ ? | ಪ. ರಾಮಕೃಷ್ಣ ಶಾಸ್ತ್ರಿ | 35 |
| * ವಿದ್ಯಾರ್ಥಿ ಜೀವನದ ಬೆಳಕು ಸರಣಿ-೧೧ | ಬಿ. ಎಸ್. ಕೃಷ್ಣಮೂರ್ತಿ | 38 |
| * ಕನ್ನಡ ಜನತೆಗೆ ಕನ್ನಡವೇಗತಿ | ಜೆ.ಬಿ. ಲಿಂಗರಾಜು | 40 |
| * ಒಂದು ಪತ್ರ | ಗೋವಿಂದರಾಜು | 41 |
| * ಏನಂತೀರಿ ? ಮಹಾತ್ಮ – ದುರಾತ್ಮ | ರಸಿಕ ಪುತ್ತಿಗೆ | 43 |
| * ಮೈಸೂರರಮನೆ | ಜೆ.ಬಿ. ಲಿಂಗರಾಜು | 45 |
| * ಕ್ಷೇತ್ರವಾರ್ತೆ | ಹೆಚ್. ಬಿ. ಗಂಗಾಧರಯ್ಯ. | 48 |

# ಶ್ರೀ ವಾ ಣಿ (ಲೇಖನ ಚಿಹ್ನೆಗಳು)

ಭಾಷೆಯ ಕಲಿಕೆಯಲ್ಲಿ ಹಲವಾರು ಹಂತಗಳುಂಟು. ಕಾಗುಣಿತ ಜ್ಞಾನ, ಉಚ್ಛಾರಣಾವಿಧಾನ, ಲೇಖನ ಚಿಹ್ನೆಗಳ ಬಳಕೆ ಮುಂತಾಗಿ. ಈ ಕ್ರಮ ಬದ್ಧತೆಗಳನ್ನು ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಹಾಗೂ ಕಾಲೇಜು ವಿದ್ಯಾಭ್ಯಾಸದ ಅವಧಿಯಲ್ಲಿ ಕಲಿಸಲಾಗುತ್ತದೆ. ಭಾಷೆಯನ್ನು ಕಲಿಯುವುದೆಂದರೆ ಸುಂದರವಾದ ಗೃಹನಿರ್ಮಾಣ ಮಾಡಿದಂತೆ. ಒಂದಕ್ಕೊಂದು ವ್ಯತ್ಯಯವಾಗಬಾರದು. ಹಾಗಾದರೆ ಅನರ್ಥ, ಅಪಾರ್ಥ, ಅನಾಹುತಗಳಿಗೇ ಆಹ್ವಾನ ನೀಡಿದಂತಾಗುತ್ತದೆ. ಭಾಷಾ ಕಲಿಕೆಯಲ್ಲಿ Punctuation ಅಥವಾ ಲೇಖನಚಿಹ್ನೆಗಳ ಪಾತ್ರ ಮಹತ್ವಪೂರ್ಣವಾದುದು. ಒಮ್ಮೆ ನಡೆದ ಪ್ರಸಂಗ ನೆನಪಾಗುಗುತ್ತದೆ. ಶಾಲೆಯೊಂದರ ತನಿಖೆಗೆ ಒಬ್ಬ ಇನ್‌ಸ್ಪೆಕ್ಟರ್ ಹೋಗುತ್ತಾರೆ. ಏಳನಯ ತರಗತಿಗೆ ಇಂಗ್ಲಿಷ್ ಭಾಷೆಯನ್ನು ಬೋಧಿಸುತ್ತಿರುತ್ತಾರೆ. ಮಧ್ಯೆ ಪ್ರವೇಶಿಸಿದ ಇನ್‌ಸ್ಪೆಕ್ಟರ್‌ರವರು ವಿದ್ಯಾರ್ಥಿಗಳಿಗೆ ಲೇಖನ ಚಿಹ್ನೆಗಳನ್ನು ಬಳಸುವ ಕ್ರಮವನ್ನು ತಿಳಿಸಲು ಪ್ರಾರಂಭಿಸುತ್ತಾರೆ. ಅಧ್ಯಾಪಕರು ಬೇಸರಗೊಂಡು ಇನ್‌ಸ್ಪೆಕ್ಟರಿಗೆ ಕೇಳಿಸದಂತೆ ಮೆಲು ದನಿಯಲ್ಲಿ The Teacher says, Inspector is a fool ಎನ್ನುತ್ತಾರೆ. ಎಷ್ಟೇ ಮೆಲುದನಿಯಲ್ಲಿ ಅಧ್ಯಾಪಕರು ಹೇಳಿಕೊಂಡರೂ ಅದು ಇನ್‌ಸ್ಪೆಕ್ಟರಿಗೆ ಕೇಳಿಸಿಯೇ ಬಿಡುತ್ತದೆ. ತಕ್ಷಣವೇ ಅವರು The Teacher, says the Inspector is a fool ಎಂದು ಬಿಡುತ್ತಾರೆ. ಇಲ್ಲಿ ಒಂದು ಅರ್ಧ ವಿರಾಮವನ್ನು ಬಳಸುವುದರಿಂದ ಆಗಿರುವ ವ್ಯತ್ಯಾಸವನ್ನು ತಿಳಿಯಬಹುದಲ್ಲವೆ ? ಇನ್ನೊಮ್ಮೆ ನಡೆದ ಪ್ರಸಂಗ ಒಬ್ಬ ಸುಪ್ರಸಿದ್ಧ ತತ್ವಜ್ಞಾನಿಯನ್ನು ವಿದಾರ್ಥಿಯೊಬ್ಬ ಸಂಧಿಸಿದಾಗ ಹೀಗೆ ಹೇಳಿದನಂತೆ God is no where ಎಂಬುದಾಗಿ. ತಕ್ಷಣವೇ ಆ ತತ್ವಜ್ಞಾನಿ ಅದೇ ಮಾತನ್ನು ಒಂದು ಕಾಗದದ ಮೇಲೆ ಬರೆದು ಕೊಡುವಂತೆ ಕೇಳಿದರು. ವಿದ್ಯಾರ್ಥಿ ಬರೆದು ಕೊಟ್ಟ. ಆ ತತ್ವಜ್ಞಾನಿ ಕಾಗದ ಮೇಲಿದ್ದ ಆವಾಕ್ಯದಲ್ಲಿ ಒಂದು ಸಣ್ಣ ತಿದ್ದು ಪಡಿಮಾಡಿ ದೇವರು ಈಗ ಇಲ್ಲಿದ್ದಾನೆ ಎಂಬುದನ್ನು ತೋರಿಸಿಕೊಟ್ಟರಂತೆ God is now here ಎಂಬುದಾಗಿ. ನೀವು ಕೇಳಿರಬಹುದು ನ್ಯಾಯಾಧೀಶನೊಬ್ಬ "Kill him not save him" ಎಂಬ ತೀರ್ಪು ನೀಡಿದ್ದನ್ನು ಅಪರಾಧಿಯಪರವಾಗಿ ವಾದಿಸಿದ ನ್ಯಾಯವಾದಿ ಆ ವಾಕ್ಯದಲ್ಲಿ ಒಂದು ಅರ್ಧ ವಿರಾಮವಿಲ್ಲದ್ದನ್ನೂ ಗಮನಿಸಿ ತನ್ನಕಕ್ಷಿದಾರನಿಗೆ ಅನುಕೂಲಕರವಾಗುವಂತೆ ಅರ್ಧ ವಿರಾಮವನ್ನು ಬಳಸಿ ಆಗಬಹುದಾಗಿದ್ದ ಮರಣ ದಂಡನೆಯನ್ನು ತಪ್ಪಿಸಿದನೆಂಬುದನ್ನು "Kill him not, save him" ಅರ್ಧವಿರಾಮವೊಂದು ಪ್ರಾಣಉಳಿಸಿತಲ್ಲವೆ? ಹೀಗೆ ಭಾಷಾ ಕಲಿಕೆಯಲ್ಲಿ ಲೇಖನ ಚಿಹ್ನೆಗಳಿಗೆ ಮಹತ್ವಸ್ಥಾನವಿದೆ. ಇತ್ತೀಚಿಗೆ ಲೇಖನ ಚಿಹ್ನೆಗಳನ್ನು ಹೇಗೆ ಬಳಸಬೇಕೆಂಬುದನ್ನು ಕಲಿಸುತ್ತಿರವುದು ಕಾಣಬರುತಿಲ್ಲ ಇದೊಂದು ವ್ಯಸನಕರ ಸಂಗತಿ.

[ 31-10-91 ರಂದು ಖಾಸಗಿ ಮಾತು ಕಥೆಗಳ ಮಧ್ಯೆ ಮೂಡಿ ಬಂದ ನಿರೂಪಣೆ. ]

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ-572104**
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾಕ್ಷೇತ್ರ


## ಚಂದಾ ವಿವರ

ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---


**"ಸಂಪಾದಕರು"**
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ಹಾಳು ಕೇರಿಯಲ್ಲಿ ಒಂದು ಹಂದಿ ನಾಯಿಯು ಮೈಥುನವ
ಮಾಡುವುದನು ಕಂಡು

ಆಕಾಶದಲ್ಲಾಡುವ ಅರಗಿಳಿ ನಗುತಿದೆ ನೋಡಾ

ಆದುತಾಡುತ ಬಂದು ಅರಗಿಳಿ ಮಾರ್ಜಾಲವ ನುಂಗಲು

ಮಾಯಾವಿಲಾಸವಡಗಿತ್ತು ನೋಡಾ

ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ.

ಚಿತ್ಕರಣಗಳು ಸಂಚರಿಸದ ಭೂತ ಕಾಯವೆಂಬ ಹಾಳು ಕೇರಿಯಲ್ಲಿ ಅವಿದ್ಯಾ ಶಕ್ತಿಯು ಕರಣೇಂದ್ರಿಯಗಳೊಡನೆ ಕೂಡಿವರ್ತಿಸುವುದನ್ನು ಚಿದಾಕಾಶದಲ್ಲಾಡುವ ಪರಮಾತ್ಮ ಲಿಂಗ ಸ್ವರೂಪವಾದ ಶರಣನು ಕಂಡು ಇದೆತ್ತಣ ಸಂಬಂಧವೆಂದು ಗಹಗಹಿಸಿ ನಗುತ್ತಿದ್ದನು. ಆ ಶರಣನು ಸತ್ಕ್ರಿಯೆ ಸಮ್ಯಕ್‌ಜ್ಞಾನಗಳಿಂದ ಪ್ರವರ್ತಿಸಿ ಭೇದಜ್ಞಾನವ ನಷ್ಟಮಾಡಲು, ಅವಿದ್ಯಾಕಾರ್ಯವು ನಿವೃತ್ತಿಯಾಗಿರ್ಪುದು.

# ಸಂಪಾದಕೀಯ

ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೋ

ಕರುಣಿ ಕಲ್ಯಾಣ ಬಸವಣ್ಣ । ಕೂಡಲ ಸಂಗ

ಕಡೆತನಕ ಕಾಯೋ ಅಭಿಮಾನ ॥

ಕನ್ನಡ ನಾಡಿನ ಈ ಜನಪದ ಮುಕ್ತಕವನ್ನು ಗಮನಿಸಿದಾಗ ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಿರುವ ಕನ್ನಡಿಗರಲ್ಲಿ ಅಭಿಮಾನವಿದೆಯೇ ಎಂದೆನಿಸುತ್ತದೆ. ಸ್ವಾಭಿಮಾನಧನರಾಗಿ ಕನ್ನಡನೆಲ ಜಲಗಳಿಗಾಗಿ ಹೋರಾಟ ಮಾಡುವ ಕೆಚ್ಚು ಇನ್ನೂ ಏಕೆ ಪ್ರಜ್ವಲಿಸುತ್ತಿಲ್ಲ ಎನ್ನಬೇಕಾಗಿದೆ. ಆಕರ್ಷಕ ಘೋಷಣೆಗಳಿಂದ ಕನ್ನಡದ ಉದ್ಧಾರವಾಗುತ್ತದೆಯೇ? ಕನ್ನಡವನ್ನು ಆಡಳಿತ ಭಾಷೆಯಾಗಿ ಅನುಷ್ಠಾನಕ್ಕೆ ತರುವಲ್ಲಿ ನೂರಾರು ಆದೇಶಗಳು ಮಾತ್ರ ಸಾಕೆ ? ಅವುಗಳ ಪಾಡೇನಾಗಿದೆ ಇಂದು ? ಆಡಳಿತ ಸೂತ್ರಗಳನ್ನು ಹಿಡಿದು ಕೂತಿರುವ ಅಧಿಕಾರಿಗಳು ಕನ್ನಡಿಗರಾಗದ ಹೊರತು, ಕನ್ನಡಾಭಿಮಾನಿಗಳಾಗದ ಹೊರತು ಇಂಗ್ಲೀಷ್ ವ್ಯಾಮೋಹದಿಂದ ಮುಕ್ತರಾಗದಹೊರತು, "ಕನ್ನಡ" ಸರ್ಕಾರದ ವ್ಯವಹಾರದಲ್ಲಿ ತನ್ಮಯವಾಗದ ಹೊರತು ರಾಜ್ಯೋತ್ಸವಕ್ಕೆ ಅರ್ಥವೆಲ್ಲಿ ? ಕನ್ನಡ ವಿಶ್ವವಿದ್ಯಾನಿಲಯ, ಕನ್ನಡ ಭವನ ನಿರ್ಮಾಣ, ಕನ್ನಡ ಮಾದರಿ ಶಾಲೆಗಳ ಪ್ರಾರಂಭ, ಕನ್ನಡ ಪುಸ್ತಕ ಪ್ರಾಧಿಕಾರ ಇವೆಲ್ಲ ಸ್ವಾಗತಾರ್ಹ ಕ್ರಮಗಳೇ, ಅದಕ್ಕಿಂತಲೂ ಹೆಚ್ಚು ಕನ್ನಡನಾಡಿನ ಆಡಳಿತ ವ್ಯವಹಾರ ಕನ್ನಡದಲ್ಲಿಯೇ ನಡೆಯಬೇಕೆಂಬ ಛಲ ಹಾಗೂ ನಿಷ್ಠೆ. ಕೇವಲ ಯೋಜನೆಗಳಪ್ರಾರಂಭದಿಂದ ಕನ್ನಡಉದ್ಧಾರವಾಗದು. ಮೊನ್ನೆ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ಎಸ್. ಸಿದ್ಧಲಿಂಗಯ್ಯನವರು ಹೇಳಿರುವಂತೆ ಕನ್ನಡವನ್ನು ಅನುಷ್ಠಾನಕ್ಕೆ ತರುವ ಅಧಿಕಾರಿಗಳ ಮನಸ್ಸು ದೊಡ್ಡದಾಗಿರಬೇಕು ಎಂಬ ಮಾತು ಗಮನಾರ್ಹ. ಆಡಳಿತ ನಡೆಸುತ್ತಿರುವ ನಾಯಕರು ಈ ಮಾತನ್ನು ಗಂಭೀರವಾಗಿ ಗಮನಿಸಬೇಕು. ತಾವು ಹೊರಡಿಸಿದ ಆದೇಶ ಪಾಲನೆಗೆಬರಲಿಲ್ಲವೆಂದರೆ ಏನರ್ಥ? ಅದಕ್ಕಿರುವ ಅಡ್ಡಿ ಯಾವುದು? ಪರಿಹಾರಬೇಕು ಎಂಬುದಾಗಿ ಸಚಿವರು ತಮ್ಮ ಕಡೆಗೆ ಬರುವ ಕಾಗದ ಪತ್ರಗಳಿಗೆ ವಿಶೇಷ ಸಂದರ್ಭಗಳನ್ನು ಹೊರತುಪಡಿಸಿ ಕನ್ನಡದಲ್ಲಿ

ಟಿಪ್ಪಣಿಹಾಕಬೇಕು. ಕನ್ನಡದಲ್ಲಿ ಬರೆದ ಪತ್ರಗಳಿಗೆ ಸ್ಪಷ್ಟವಾಗಿ ಕನ್ನಡದಲ್ಲಿ ಬರೆದು ತರುವಂತೆ ತಿಳಿಸಬೇಕು. ಶ್ರೀ ಪಾಟೀಲಪುಟ್ಟಪ್ಪನವರು ಕಾವಲುಸಮಿತಿ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ನಡೆಯುತ್ತಿದ್ದ ಕನ್ನಡಬಳಕೆ ಇಳಿಮುಖವಾಗಲು ಕಾರಣಗಳೇನು? ಪರಾಮ ರ್ಶಿಸಬೇಕು. ಬೆಂಗಳೂರಿನಲ್ಲಿ ಕನ್ನಡ ಭಾಷಿಕರು ಅಲ್ಪ ಸಂಖ್ಯಾತರಾಗುತ್ತಿರುವ ಬಗೆಗೆ ಅನ್ಯರಾಜ್ಯಗಳಿಂದ ಬರುತ್ತಿರುವ ವಲಸೆ ಜನಪ್ರವಾಹವೇ ಕಾರಣವೆಂಬುದು ಸರ್ಕಾರಕ್ಕೆ ಗೊತ್ತಿಲ್ಲದಿರುವ ವಿಚಾರವೇನಲ್ಲ. ಇದು ಹೀಗೆ ಮುಂದುವರೆದರೆ ಬೆಂಗಳೂರು ಕರ್ನಾಟಕದ ರಾಜಧಾನಿಯಾಗಿ ಕನ್ನಡ ನಗರವಾಗಿ ಉಳಿದೀತೆ ಎಂಬ ಆತಂಕ ಕನ್ನಡಾಭಿಮಾನಿಗಳನ್ನು ಕಾಡುತ್ತಿರುವ ಸಮಸ್ಯೆ. ಅದಕ್ಕಾಗಿ ಅದೆಷ್ಟು ಪ್ರಜ್ಞಾವಂತರು ಇಂದುಸಂಘ ಸಂಸ್ಥೆಗಳ ಮೂಲಕ ಸರ್ಕಾರಕ್ಕೆ ಮನವಿ ಸಲ್ಲಿಸುತ್ತಿರುವುದು ಅಂಥ ಮನವಿಗಳನ್ನು ಸರ್ಕಾರ ತೀವ್ರವಾಗಿ ಪರಿಗಣಿಸಬೇಕು. ಏಕೆಂದರೆ ಕನ್ನಡ ಇದ್ದರೆ ಕನ್ನಡಿಗರಿದ್ದರೆ ತಾನೇ ಕನ್ನಡ ಸರ್ಕಾರ. ಅಂಥಅಭಿಮಾನ ಕನ್ನಡ ಭುವನೇಶ್ವರಿ ಎಲ್ಲರಿಗೂ ದಯಪಾಲಿಸಲೆಂದು 'ಸಿದ್ಧಗಂಗಾ' ಹಾರೈಸುತ್ತದೆ.

---

ಕರ್ಣದ ಸೂತಕ ಹೋಯಿತ್ತು ಸದ್ಗುರು ವಚನದಿಂದ ;

ಕಣ್ಗಳ ಸೂತಕ ಹೋಯಿತ್ತು ಸದ್‌ಭಕ್ತರ ಕಂಡೆನಾಗಿ ;

ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ ;

ನಾನಾ ಸೂತಕ ಹೋಯಿತ್ತು ನಿಮ್ಮ ಶರಣರ ಅನುಭವವ ಕೇಳಿದೆನಾಗಿ ;

ಕೂಡಲ ಸಂಗಮದೇವಯ್ಯ.

ಎನ್ನ ನಾನಾ ಸೂತಕ ಹೋಯಿತ್ತು ನೀವಿಲ್ಲದನ್ಯವಿಲ್ಲವೆಂದಾಗಿ.

—ಬಸವಣ್ಣನವರು.

## ಶ್ರೀಮದುದ್ದಾನೇಶ್ವರ ಶತಕಂ

ಜೆ. ವಿ. ರಾಜಶೇಖರಯ್ಯ, ನೆಲಮಂಗಲ.

ಹೊಗಲು ಜಾರಾಲಯವಕಾಮವು
ಹೊಗಲು ದೇವಾಲಯವ ಪ್ರೇಮವು
ಬಗೆಗೆತೋರುವುದಾಗಿ ದುಷ್ಟಕೃತಘ್ನಸಂಘದೊಳೂ ।
ಹೊಗದೆ ಸದ್ಗುಣ ಶುಚಿಕೃತಜ್ಞತೆ
ಬಗೆದು ಸನ್ಮಾರ್ಗದೊಳು ನಡೆಯಲು
ನಗುತಪಾಲಿಪ ಜೀಯ ಉದ್ದಾನೇಶದಯವಾಗೋ ॥

ದುಷ್ಟಕಾರ್ಯವ ಮಾಳ್ಪಶಕ್ತಿಯೆ
ಶಿಷ್ಟಕಾರ್ಯವನೆಸಗಬಲ್ಲುದು
ದುಷ್ಟಕಾರ್ಯದೆ ಪಶುಕೆಸುಕೃತದೆ ದೇವತಾಜನ್ಮಾ ।
ಸ್ಪಷ್ಟತರ ಸುಖದುಃಖಗಳೆಫಲ
ವಿಷ್ಟಕೂರಹ ವಾಸಕಾರಣ
ಶಿಷ್ಟರೊಳಗಿರಿಸುತ್ತೆ ಉದ್ದಾನೇಶದಯವಾಗೋ ॥

ತನವು ಶಾಶ್ವತವಲ್ಲವಾರಿಗು
ಧನಕನಕ ಸಿರಿಪಶುವುಮನೆಯೊಳು
ಮನದ ಸತಿಸುತ ಬಳಗಮಸಣದೆನೆಲದಲ್ಲಿಲ್ಲೇ
ಘನದಿ ನಂಬಿದ ತನುವುಗುಳಿಯೊಳು
ಮನದ ಪುಣ್ಯವು ಪಾಪಜತೆಯೊಳು
ಚಿನುಮಯಾತ್ಮಕಜೀಯ ಉದ್ದಾನೇಶದಯವಾಗೋ ॥

ಪಾಪದಾ ಬಿರುಗಾಳಿಯಿಂ ಭವ
ತಾಪದಾನರ ಕಾಬ್ಧಿಸೇರಿದೆ
ತಾಪಸುಳಿದಾರಿದ್ರ್ಯಮಡುಜನಿಮರಣದಲೆಯೊಳಿಹೇ ।
ಕೋಪಕ್ಷುತ್ತೃಷ್ಣೆಮೊಸಳೆ ಬಾಧೆವಿ
ಕಲ್ಪದಿಂ ಗತಿಗಾಣದಿದೆಂಬ
ದಾಪದುದ್ಧರ ಜೀಯಉದ್ದಾನೇಶದಯವಾಗೋ ॥

(ಮುಂದುವರಿಯುವುದು)

# ಬಸವ ತತ್ತ್ವ ರತ್ನಾಕರ ....7

## (ವಚನಕಾವ್ಯಸುಧಾಸಾಗರ)

ಶ್ರೀ ಮೋಟಗಿ ಮಲ್ಲಿಕಾರ್ಜುನ, 'ಕನ್ನಡ ಕವಿ ಕಾಳಿದಾಸ', ಅಥಣಿ, ಬೆಳಗಾವಿ ಜಿಲ್ಲೆ.

### ದಿವ್ಯ ಸಾಕ್ಷಾತ್ಕಾರ [66]

"ಲಿಂಗಕ್ಕೆ ಲಿಂಗ ಸಂಬಂಧವಾಗಿ
ಆತ್ಮಂಗೆ ಅರಿವು ಸಂಬಂಧವಾಗಿ
ಅರಿವಿಂಗೆ ನಿಶ್ಚಯ ಸಂಬಂಧವಾಗಿ
ನಿಶ್ಚಯ ನಿಜದಲ್ಲಿ ನಿಂದಿತ್ತಾಗಿ
ಇಷ್ಟಲಿಂಗದ ತೃಷ್ಣೆ ಅಡಗಿತ್ತು.
ಶ್ರೀಶೈಲ ಮಲ್ಲಿಕಾರ್ಜುನ ಲಿಂಗವನರಿಯಲಾಡಿ.

### ಆತ್ಮಸಾಹಿತ್ಯ [67]

"ಅನುಭಾವದ ಅಣಿಮುತ್ತುಗಳೆನೆ ಹೊಳೆಯುತ್ತಿಪ್ಪ
ಬಸವಾದಿಪ್ರಮಥರಾ ಅಗಣಿತ ವಚನಗಳಿವು
ಜನ ಮನ ಭಾವ ಪರಿವರ್ತನೆಗೆ, ಸಮಾಜ ಸುಧಾರಣೆಗೆ
ಕಾರಣವೆನಿಸಿದುವು ನೋಡಾ.
ಲಿಂಗಭಕ್ತಿ ಜ್ಞಾನ ವೈರಾಗ್ಯ ಕ್ರಿಯಾಚರಣೆಗೆ ಅನುಕೂಲಮಪ್ಪ
ಬೋಧನಾತ್ಮಕ ದಿವ್ಯಾಮೃತ ವಾಣಿಗಳಾದುವು ನೋಡಾ.
ಲಿಂಗಾಂಗ ಸಾಮರಸ್ಯಾನುಭವಕ್ಕೆ ಈವಚನ ಕಾವ್ಯರತ್ನಗಳು
ಪ್ರತ್ಯಕ್ಷ ಪರಮಪ್ರಮಾಣವಾಣಿಗಳೆನಿಸಿದುವು ನೋಡಾ
ಇಂತೀಶಿವಶರಣರ ಆತ್ಮಸಾಹಿತ್ಯವಿಂದು 'ವಿಶ್ವಧರ್ಮಸಾಹಿತ್ಯ' ವೆನಿಸಿ
ಬೆಳಗುತಿಪ್ಪುದು ಕಾಣಾ, ಶ್ರೀಶೈಲಮಲ್ಲಿಕಾರ್ಜುನ !

## ವಚನ ವಾಙ್ಮಯ [-8]

"ವೇದಾಗಮೋಪನಿಷತ್ತಂಗಳಿಗೂ ಮಿಗಿಲೆನಿಸಿರ್ದ
ಈ ವಚನವಾಙ್ಮಯವಿಂದು ಪೃಥ್ವಿಯಪ್ರಾಣವಾಗಿ ಪರಮ
ಸಂಜೀವಿನಿಯಾಗಿ ಮೆರೆಯುತಿಪ್ಪುದು ನೋಡಾ.
ಮಹಾನುಭಾವಿ ಶಿವಶರಣರಾ ವಚನಕಾವ್ಯರತ್ನಗಳಲ್ಲಿನ ಒಂದೊಂದು
ಶಬ್ದಾರ್ಥಂಗಳು ಭೂಮಿ ಆಕಾಶಂಗಳನಿತು
ವ್ಯಾಪಕಾರ್ಥವನೊಳಗೊಂಡಿಪ್ಪವು ನೋಡಾ !
ಇಂತು ಸೃಷ್ಟಿಗೆ ಜೀವಂತ ಆತ್ಮಸಾಹಿತ್ಯ ಸಾಗರವನಿತ್ತು
ಮಹಾಶ್ರೇಯಮದು ಎಮ್ಮ ಶಿವಶರಣರಿಗೆ ಸಂದಿತ್ತುನೋಡಾ !
ಈಬಗೆಯು, ಆ ಬ್ರಹ್ಮಾಂಡಗಳನೆ ಪವಿತ್ರವಾಗಿಸುವ
ಸೋಜ್ವಲವಾದ ದಿವ್ಯಸಂಜೀವಿನಿಯಾದ
ಸ್ವಾನುಭವ ಸಾಹಿತ್ಯ ಸುಧಾ ಸಂಪತ್ತನ್ನು
ಈ ಮೊದಲು ಸೃಷ್ಟಿಗಾರೂ ಕೊಡಲಿಲ್ಲ ನೋಡಾ !
ಇಂತು ಆತ್ಮಸಾಹಿತ್ಯ ಸಾಗರಮೂದ ಈ ವಚನ ವಾಙ್ಮಯದೈಶ್ವರ್ಯ
ಭುವನ ಸೌಭಾಗ್ಯ ಸಂಪದಮೇಣ್ ಸತ್ಯಶಿವಸೌಂದರ್ಯ
ಕಾಣಾ ! ಶ್ರೀಶೈಲ ಮಲ್ಲಿಕಾರ್ಜುನ ! "

---

ಟೀಪು. **ಸತ್ಯಸಾಕ್ಷಾತ್ಕಾರ (ಕಾವ್ಯಸಂಪದ)**

"ಚಿರಗಭೀರ ಪ್ರಣಿಧಾನ ಕಾಲದಲಿ ಚಿದ್ಘನ ಹೃದಯಾಂತರಾಳದಲಿ
ಪರತರಾನಂದವೇನೊ ! ದಿವ್ಯಶಾಂತಿಸಾಗರವೆ-ಅಲ್ಲಿ ! !
ಮಾನಸದಾಚೆಯ ಭಾವಾತೀತದ ನಿರ್ಭರ ಮೌನದಲಿ
ಸಾನುರಾಗದಿ ಸಾಮರಸ್ಯಕೆ ಒಲಿದಿಹ ಶಿವಶಕ್ತಿಯಲಿ
ಲೋಕಲೌಕಿಕ ಧರ್ಮಗಳೆಲ್ಲ ಸಾರಸರ್ವೈಕ್ಯಮಾಗಿರಲು ಮುಕ್ತಿ
ನಾಕನರಕಗಳೆಂಬ ಬಗೆಯಳಿಯೆ ಬೆಳಗೆ ನಿಸರ್ಗಧರ್ಮಜ್ಯೋತಿ "

– ಕನ್ನಡಕವಿಕಾಳಿದಾಸ

## ನಿರಂಜನ ಜಂಗಮ ಪ್ರಭುವ್ರೋರ್ವನೇ [69]

"ಜಂಗಮ ಜಂಗಮರೆಂದಡೆ ಅಶನಕಾಗಿ ಭಕ್ತರಂಗಳದಲ್ಲಿ
ಕಾಯ್ದುಕೊಂಡಿಪ್ಪ ಅಯ್ಯಗಳೆಲ್ಲ ಜಂಗಮರಪ್ಪರೇನು ಹೇಳಯ್ಯಾ ?
ಅಜ್ಞಾನಿ ಅನಾಚಾರಿ ಅಸಂಖ್ಯ ಜಂಗಮರಿರ್ದಡೇನು
ಅವರಿಂದ ಜಗಕೆ ಹಾನಿಯಲ್ಲದೆ ಹಿತವಪ್ಪುದೇನು ಹೇಳಯ್ಯಾ ?
ಷಟ್‌ಸ್ಥಲ ಜ್ಞಾನಚಕ್ರವರ್ತಿ ಚನ್ನಬಸವಣ್ಣ
ತ್ರಿಕಾಲಜ್ಞಾನಿ ಮಹಂತ ಮಹಾನುಭಾವಿ ನೋಡಾ.
ಇಂತಪ್ಪ ಚನ್ನಬಸವಣ್ಣ : ನಿರಂಜನ ಜಂಗಮವೆಂದಡೆ
ಅಲ್ಲಮಪ್ರಭುದೇವರೊಬ್ಬರೆಂದು ಜ್ಞಾನದಿಂದತಿಳಿದುಬಂದಿತ್ತು ಎಂದುದಾಗಿ
ನಿತ್ಯನಿರಂಜನ ಮೂರ್ತಿ ವ್ಯೋಮಕಾಯ ನಿರ್ಮಾಯ !
ನಿಜಜಂಗಮ ಆತ್ಮಜ್ಞಾನಿ ಅಲ್ಲಮ ಪ್ರಭುವ್ರೋರ್ವನೇ ನೋಡಾ !
ಚತುರ್ದಶಭುವನಂಗಳಲ್ಲಿ-ಇದು ನಿಜಕ್ಕೂ
ಸತ್ಯಕಾಣಾ, ಶ್ರೀಶೈಲಮಲ್ಲಿಕಾರ್ಜುನ."

## ಶರಣರ ಸೇವಾಕಾಂಕ್ಷೆ [70]

"ಸರ್ವಲೋಕೋಪಕಾರಾಯ ಮಿದಂಶರೀರಂ, ಎಂಬಂತೆ
ಶರಣರ್ಕಳ್‌ಸಕಲ ಲೋಕಗಳುದ್ಧರಣೆಗಂ ಅವತರಿಸುತಿರ್ಪರು ನೋಡಾ.
ಆಗಾಗ ಆ ಭೂದೇವಿ ಗೆಯ್ದ ಅನಂತಕಾಲದಾ
ಪುಣ್ಯತಪಸಿಂಗೊಲಿದು ಬಸವಣ್ಣ ಸಪ್ತ ಜನ್ಮಂಗಳಂ
ತಳೆದು ಭುವಿಗೆ ಬಂದಿರ್ಪರು ನೋಡಾ.
ಪ್ರಭುವಿಂಗೆ ನಾಲ್ಕು ಜನ್ಮಂಗಳಾದಡೆ, ಚನ್ನಬಸವಣ್ಣಂಗೆ ಒಂದೆ ಜನ್ಮವಾಯಿತ್ತು ನೋಡಾ
ಇಂತಪ್ಪ ಮಹಾಮಹಿಮರೆಲ್ಲರ್ಕಳ್ ಆ ಬಸವರಾಜದೇವರ
ಮಹಂತಲೀಲಾವಿಲಾಸದೊಳ್ ಭುವಿಗೆ ಬಂದಪರು ನೋಡಾ
ಆನು ಹನ್ನೊಂದು ಜನ್ಮಂಗಳೊಳು ಬಂದೆ ನೋಡಾ
ಬಸವೇಶ ! ನೀವು ಅನುಜ್ಞೆಗೆಯ್ದು ಕಳಿಸಿದಿರಾಗಿ,
ದೇವ ದೇವ ! ಮಹಾದೇವ ! ಬಸವೇಶ ! ತಂದೆಯೇ ! ಭಯ ಭಕ್ತಿಯಿಂ
ತವ ಸನ್ನಿಧಿಯೊಳೊಂದೆ ಬೇಡುವೆನು :
ನೀವೆನಿಸು ಜನ್ಮಂಗಳೊಳು ಬರಿಸಿದೊಡುಂ
ಸಂತತಂ ಆನು ನಿಮ್ಮ ಶರಣರಾ ಸಂಗ-ಸೇವೆಯಂ ಮಾಳ್ಪ
ಭಾಗ್ಯಮಂ ಕರುಣಿಪುದೆಂದು-ಕೇಳುವೆನು !

ಪರಶಿವಮೂರ್ತಿ ಬಸವೇಶ ತಂದೆಯೇ ! ತವಪದ ಪದ್ಮಂಗಳಲ್ಲಿ
ಶತ ಶತ ಕೋಟಿ ಪ್ರಣಾಮಂಗಳಂ ಸಲಿಸುತಂ
ಭಕ್ತಿ ಮಾನಸ ಹೃದಯಂಗಳಿಂ ತ್ರಿಕಾಲದೊಳ್
ಸ್ಮರಿಸುತಲಿದ್ದೆ ಕಾಣಾ ! ಶ್ರೀಶೈಲ ಮಲ್ಲಿಕಾರ್ಜುನ !

### ಧರೆಗಿಳಿದು ಬಾ ಚನ್ನಬಸವಣ್ಣ [71]

"ಬಸವರಾಜ ! ಅಂದು ನೀವು ಪ್ರಮಥಗಣ ಮೇಳದಿಂ
ಭುವಿಗೆ ಬಂದು ಕಲ್ಯಾಣದೊಳ್ ನಿಂದು
ವಿಶ್ವ ಕಲ್ಯಾಣಕ್ರಾಂತಿ ಗೆಯ್ದಿರಲ್ತೆ ?
ಒಬ್ಬ ಜಂಗಮನ ಅಭಿಮಾನದಿಂದ ಕಲ್ಯಾಣ ಪಟ್ಟಣ ಹಾಳಾಯಿತ್ತು
ಎಂದು, ಅಂದು ಪೇಳ್ದ ವಚನವಾಣಿ ಸತ್ಯವಾಯಿತ್ತು.
ನೀವು ನಿಮ್ಮ ಮಣಿಹ ಪೂರೈಸಲೊಡನೆ
ಕೂಡಲಸಂಗಮದೇವನೊಳ್ ಕೂಡಿ ಬಯಲಾದಿರಲ್ತೆ ?
ಜಗದ ಕಾಲಚಕ್ರಗತಿಯಂತೆ ನಡೆದು ಹೋಯಿತ್ತು.
ಅದೆಲ್ಲ ನಿಮ್ಮ ಮಹಾಲಿಂಗವಿಲಾಸಲೀಲೆ!
ಅಂದು ತ್ರಿಕಾಲ ಜ್ಞಾನಿ ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣ
ಇನ್ನು ಏಳುನೂರೆಪ್ಪತ್ತು ವರುಷಂಗಳ್ ಕಳೆಯಲ್ಕಂದು
ಮತ್ತೆನಾವೆಲ್ಲ ಪ್ರಮಥರೊಡಗೂಡಿ ಭುವಿಗೆ ಬಂದೇವು !
ಎಂದು ಕಾಲಜ್ಞಾನವಾಣಿಯಂ ತಿಳುಪಿ,
ಎಮಗೆಲ್ಲ ಸಾಂತ್ವನನುಡಿಪೇಳ್ದು ನೀವು ಉಳುವಿಯೊಳ್
ಲಿಂಗದಲಿ ಬೆರೆದು ಲಿಂಗವಾಗಿರ್ದಿರಲ್ತೆ ?
ಚನ್ನಬಸವೇಶ! ತಮ್ಮ ಕಾಲಜ್ಞಾನವಾಣಿಯಾ ಸಂದೇಶದೊಲ್
ಅಂದಿನಿಂ ಇಂದಿನಾ ಪರಿಯಂತ ಧಾರಿಣಿಯೊಳು
ನಡೆಯಬಾರದುದೆಲ್ಲ ನಡೆದು ಹೋಯಿತು ತಂದೆ!
ತವಗುರುವರ ಬಸವರಾಜ ಅಂದು ತಮ್ಮ ಹೃದಯಾಂಬುಧಿಯೊಳ್
ಅಡಗಿಕುಳ್ಳಿರ್ದ ಜಂಗಮ ಲಾಂಛನದಾ ಅಯ್ಯಗಳನೆಲ್ಲ
ಪಾವನಗೆಯ್ದು ಮುಕ್ತಗೊಳಿಸಿದರಾದಡುಂ ಕಾಲಗತಿಯೇನೊ !
ಮತ್ತೆ ಕೆಲಬೀಜವಾಗುಳಿದಿರ್ದ ಅಯ್ಯಗಳಿಂದು
ಬೆಳೆದು ಬಹುವಾಗಿ ನಿಂದು ಬಸವಧರ್ಮ
ಪಾಳುಗೆಯ್ದಿಹರು ತಂದೆ ಚನ್ನಬಸವೇಶ !
ಗುರು-ಲಿಂಗ-ಜಂಗಮ ತತ್ತ್ವಂಗಳ ಹದಗೆಡಿಸಿ ಜಾತಿಕುಲ ಸಾರಿದರಯ್ಯ
ಅಯ್ಯಗಳೊಂದು ತಮ್ಮ ಜಾತಿಯನೆ ನಿರ್ಮಿಸಿಹರಯ್ಯ.
ಬೆಳಗುವಾ ನಿರಭ್ರಮಾದ ಬಸವತತ್ತ್ವಾಕಾಶದೊಳೆಲ್ಲ

ಜಾತಿ ಕುಲ ಕಪ್ಪು ಮೋಡಗಳೇ ಬಂದು ಆವರಿಸಿಹವಯ್ಯ.
ಶಿವನೆ ಬಸವಾ! ಬಸವಾ ಶಿವನೆ! ಇನ್ನು ಕರುಣಿಸಾ ಬಸವತಂದೆ!
ನಿಮ್ಮ ಪ್ರಮಥರಾ ಕಾಲಜ್ಞಾನವಾಣಿಯಂತೆ
ಧರೆಗೆ ಚನ್ನಬಸವಣ್ಣ ಬರುವ ಕಾಲ ಸಮನಿಸಿತು!
ಬಸವೇಶ! ಕೃಪಾಸಾಗರ! ಧರ್ಮಮೂರ್ತಿ! ದಯಾಸಿಂಧು! ನೀವೆಕೃಪೆಗೆಯ್ದು
ನಿಮ್ಮ ಪುರಾತನರೊಡನೆ ಜ್ಞಾನ ಭಾನು ಪ್ರಕಾಶಮೂರ್ತಿ
ಚನ್ನಬಸವನಂ ಧರೆಗೆ ಕಳುಹಿಸಯ್ಯ!
ಬಸವತತ್ತ್ವಾಕಾಶ ನಿರಭ್ರವಾಗಲಿ! ಶುಭ್ರವಾಗಲಿ!
ಶಿವತತ್ತ್ವಾಂಬುಧಿ ಉಕ್ಕಿಬರಲಿ! ಗಗನ ತರಂಗ ತುಂಬಲಿ!
ತ್ರಿಭುವನ ತುಂಬ ಬಸವತತ್ತ್ವ ಬೆಳಗಲಿ!
ಶ್ರೀ ಶೈಲಮಲ್ಲಿಕಾರ್ಜುನ."

**ಅನಾದಿ ಶರಣ ಬಸವ** [72]
"ಭೂಮಿ ಆಕಾಶ ಸೂರ್ಯ ಚಂದ್ರ ತಾರಾ ಮಂಡಲ
ಸಪ್ತ ಸಮುದ್ರಗಳಿಲ್ಲದಂದು, ಏನೂ ಇಲ್ಲದಂದು,
ಅನಾದಿಯಲ್ಲಿ ಬಸವ ಶರಣ ಉದಯವಾದನಂದು.
ಆ ಶರಣನಿಂದ ಸದಾಶಿವ ಹುಟ್ಟಿದ
ಆ ಸದಾಶಿವನಿಂದ ಶಿವ ಹುಟ್ಟಿದ
ಆ ಶಿವನಿಂದ ರುದ್ರ ಹುಟ್ಟಿದ
ಆ ರುದ್ರನಿಂದ ವಿಷ್ಣು ಹುಟ್ಟಿದ
ಆ ವಿಷ್ಣುವಿನಿಂದ ಬ್ರಹ್ಮ ಹುಟ್ಟಿದ
ಆ ಬ್ರಹ್ಮನಿಂದ ಸಕಲ ಜಗತ್ತುಗಳು ಹುಟ್ಟಿದವು
ಇವರೆಲ್ಲ ನಮ್ಮ ಶ್ರೀ ಶೈಲಮಲ್ಲಿಕಾರ್ಜುನನ ಕರಸ್ಥಲದ ಹಂಗಿನಲ್ಲಿ ಹುಟ್ಟಿ ಬೆಳೆದರು."

**ಶಿವರಹಸ್ಯ** [73]
"ವಿಶ್ವಾಧಿಕೋ ಋಷೀ ರುದ್ರೋ ಮಹಾನ್, ಎಂಬಂತೆ
ಮಹಿಮಾಶಾಲಿಯಾದ ರುದ್ರದೇವನು
ಜನ್ಮರಹಿತನು ನಿತ್ಯನು ಕಂಡಯ್ಯ.
ಸುಜ್ಞಾನಾತ್ಮಕನು, ಸಕಲ ಸಂಪೂಜ್ಯನು–ಕಂಡಯ್ಯ
ಆತನೆ ಸರ್ವ ಸೃಷ್ಟಿ ಕರ್ತನು,
ಹರಿ ಬ್ರಹ್ಮಾದಿಗಳನು ಹುಟ್ಟಿಸಿದವನು
ಆತನೆ ಪರಮಪುರುಷ ವಾಚ್ಯನು–ಕಂಡಯ್ಯ,
'ತ್ರಿಪಾದದೂರ್ಧ್ವ ಉದೈತ್ಪುರುಷಃ ಪರಮೋ ರುದ್ರೋ ದೇವದೇವೋತ್ತಮೋತ್ತಮ; !

ಪುರುಷೋ ವೈರುದ್ರ ಏವ ಶೃತಿ ರೇಷಾಯುತೋ ಮತಾ ॥
ಇಂತೀ ಶಿವರಹಸ್ಯ ಗೀತಾರ್ಥವನರಿಯುವುದು ಕಂಡಯ್ಯ.
ರುದ್ರದೇವನು ಮೂರು ಪಾದವುಳ್ಳ ಮಹಾಪುರುಷನು,
ದೇವ ದೇವೋತ್ತಮನು, ಪುರುಷಪದ ಸಮನ್ವಿತನು,
ವ್ಯಷ್ಟಿ-ಸಮಷ್ಟಿ-ಸೃಷ್ಟಿಯನೆಲ್ಲ ವ್ಯಾಪಿಸಿರುವನು-ಕಂಡಯ್ಯ,

ಶ್ರೀ ಶೈಲಮಲ್ಲಿಕಾರ್ಜುನ."

**ಸೃಷ್ಟಿ ಹಾಗೂ ವೇದಗಳುತ್ಪತ್ತಿ** [74]

"ರುದ್ರದೇವನು ಅಗ್ನಿ ಅಗ್ಗವಣಿ ಔಷಧಿಗಳಲ್ಲಿ
ನೆಲಸಿರುವನಾಗಿ ವಿಶ್ವವನ್ನೆಲ್ಲ ವ್ಯಾಪಿಸಿರುವನು ನೋಡಾ.
ಭುವನತ್ರಯಂಗಳು ತ್ರಿಕಾಲದಲ್ಲಿಯೂ
ರುದ್ರಸ್ವರೂಪವಾಗಿಯೆ ಇರುವುವು ನೋಡಾ
ಋಗ್ವೇದ ಯಜುರ್ವೇದ ಸಾಮವೇದಂಗಳು
ರುದ್ರದೇವನಿಂದಲೆ ಹುಟ್ಟಿದುವು ನೋಡಾ
ಸಕಲ ಛಂದಸ್ಸುಗಳು, ಸಮಸ್ತ ಪ್ರಜೆಗಳು
ರುದ್ರದೇವನಿಂದಲೆ ಜನಿಸಿವೆ ನೋಡಾ
ಈ ಭೂವ್ಯೋಮಾಕಾಶಂಗಳನು, ದ್ವಾದಶಾದಿತ್ಯರನು,
ಅಷ್ಟವಸುಗಳನು, ಅರುವತ್ತು ನಾಲ್ಕು ಕಲೆಗಳನು,
ಇಂದ್ರ, ಯಮ, ವರುಣ, ವಿಷ್ಣು-ಬ್ರಹ್ಮರನು
ಹುಟ್ಟಿಸಿದಾತ ಶ್ರೀ ರುದ್ರದೇವನು ನೋಡಾ.
ಇದಕ್ಕೆ ಪ್ರಮಾಣ:
"ಯೋರುದ್ರೋಽಗ್ನಾವಪ್ಸು ರುದ್ರೋಯೋ ರುದ್ರಸ್ತ್ವೋಷಧೀಷ್ವಪಿ।
ಯೋ ವಿಶ್ವಾಭುವನಾನೇಕೋ ವಿವೇಶ ಸಪರಾತ್ಪರಃ ॥
ವಿಶ್ವಂ ಭೂತಂಚ ಭವನು ಚಿತ್ರಂಚ ಬಹುಧಾಚ ಯತ್।
ತಜ್ಜಾತಂ ಜಾಯಮಾನಂಚ ಶ್ರೀ ರುದ್ರಾತ್ಮಕಂ ವಿದುಃ ॥
ಋಚೋ ಯಜೂಂಷಿ ಸಾಮಾನಿ ರುದ್ರಾದೇವಹಿ ಜಜ್ಞಿರೇ।
ಛಂದಾಂಸಿ ಜಜ್ಞಿರೇ ರುದ್ರಾಜ್ಜಜ್ಞಿರೇ ವಿವಿಧಾಃ ಪ್ರಜಃ ॥

ಇಂತೆಂದುದ ಕೇಳಿ ಅರಿಯಿರಯ್ಯ!
ನಮ್ಮ ರುದ್ರದೇವನ ಮಹಿಮೆಯಿದು ಕಾಣಿರಯ್ಯ!
"ಧರ್ಮಜ್ಞ" ದೇವಕವಿವಾಣಿ ಅಮೃತವಯ್ಯ!
ಶ್ರೀಶೈಲ ಮಲ್ಲಿಕಾರ್ಜುನ."

# ವಿಶ್ವ ಶಾಂತಿಗೆ ಭಾರತದ ಕೊಡುಗೆ

ಶ್ರೀ ಎಂ. ಬಿ. ಸದಾಶಿವಯ್ಯ, ಇಂಗ್ಲಿಷ್ ವಿಭಾಗ, ಸಿದ್ದಗಂಗಾ ಕಾಲೇಜ್, ತುಮಕೂರು.

ಶಾಂತಿ ಪ್ರತಿಪಾದಕ ಆರ್ನಾಲ್ಡ್ ಟಾಯಿನ್ ಬೀಲವರು ಲಂಡನ್ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು ಮತ್ತು ಪ್ರಮುಖ ಇತಿಹಾಸ ತಜ್ಞರು. 1960 ರಲ್ಲಿ ಅವರು ಆಜಾದ್ ಸ್ಮಾರಕ ಉಪನ್ಯಾಸ ಮಾಲಿಯಲ್ಲಿ ಮೂರು ಉಪನ್ಯಾಸಗಳನ್ನು ನೀಡಿದರು. ಮೊದಲನೆ ಉಪನ್ಯಾಸ "ವಿಶ್ವ ಶಾಂತಿ ಮತ್ತು ಮಾನವನ ಉಳಿಯುವಿಕೆ" ಯನ್ನು ಕುರಿತದ್ದಾದರೆ, ಎರಡನೆಯ ಉಪನ್ಯಾಸ "ವಿಶ್ವ ಶಾಂತಿಯ ಭರವಸೆ" ಕುರಿತದ್ದು. ಮೂರನೆಯ ಮತ್ತು ಕೊನೆಯ ಉಪನ್ಯಾಸ "ವಿಶ್ವ ಶಾಂತಿಗೆ ಭಾರತದ ಕೊಡುಗೆ' ಕುರಿತದ್ದು, ಮೂರನೆಯ ಮತ್ತು ಮುಕ್ತಾಯದ ಉಪನ್ಯಾಸ ವಿದೇಶಿಯರಾದ ಅವರಿಗೆ ಸ್ವಲ್ಪ ಸೂಕ್ಷ್ಮವಾಗಿ ಕಂಡಿದೆ ಮತ್ತು ಮೂರು ಮುಖ್ಯ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ.

ಮೊದಲನೆಯ ಅಂಶವೆಂದರೆ ನಾಗರೀಕತೆಯು ತನ್ನ ಉಗಮ ಸ್ಥಾನವಾದ ಇರಾಕ್‌ನಿಂದ ಪೂರ್ವ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಹರಡಿದಾಗಲಿಂದಲೂ, ಭಾರತವು ಮಹತ್ವದ ಸ್ಥಾನ ಪಡೆದಿದೆ ಎಂಬುದು. ಎರಡನೆಯ ಅಂಶವೆಂದರೆ ಭಾರತವು ಈಗಿನ ಪ್ರಪಂಚದ ಸಂಕ್ಷೇಪ-ಕಾರಣ, ಪ್ರಪಂಚದಲ್ಲಿ ನಾನಾ ರಾಷ್ಟ್ರಗಳು ಇಂದು ಕಾಣುವ ಸಮಸ್ಯೆಗಳೆಲ್ಲವೂ ಭಾರತದಲ್ಲಿದೆ ಮತ್ತು ಅವು ಭಾರತದ ರಾಷ್ಟ್ರಸಮಸ್ಯೆಗಳಾಗಿ ನಮ್ಮ ಸರ್ಕಾರವು ಎದುರಿಸುತ್ತಿದೆ. ಮೂರನೆಯ ಅಂಶವೆಂದರೆ ಜೀವನ ಮತ್ತು ವ್ಯವಹಾರದ ಬಗ್ಗೆ ಭಾರತೀಯರ ಮನೋಭಾವ. ಈ ಮೂರು ಅಂಶಗಳನ್ನು ಲೇಖಕರು ಸವಿಸ್ತಾರವಾಗಿ ತಿಳಿಸಿರುತ್ತಾರೆ.

ಮೊದಲನೆಯ ಅಂಶ ಭಾರತವು ನಾಗರೀಕತೆಯ ಸಾಲಿನಲ್ಲಿ ಕೇಂದ್ರ ಸ್ಥಾನದಲ್ಲಿದ್ದು, ಈಶಾನ್ಯ ರಾಷ್ಟ್ರವಾದ ಜಪಾನ್‌ನಿಂದ ವಾಯುವ್ಯ ರಾಷ್ಟ್ರವಾದ ಐಲೆಂಡ್‌ನವರೆಗೂ ಹಬ್ಬಿದೆ. ಭಾರತದ ಮಹತ್ವ ಸ್ಥಾನ ಭೌಗೋಳಿಕವಾಗಲ್ಲದೆ ವಿಶ್ವಾದ್ಯಂತ ಇರುವ ತತ್ವಗಳ ಪೈಪೋಟಿಯಲ್ಲಿಯೂ ಸಮತೋಲನ ಭಾವನೆ ತಳದಿದೆ. ಏಷ್ಯಾ ಖಂಡದಲ್ಲಿ ಪ್ರಜಾಪ್ರಭುತ್ವ ಬಲವಾಗಿ ಬೇರೂರಿದೆಯೆಂದರೆ ಅದಕ್ಕೆ ಭಾರತ ಪ್ರಜಾಪ್ರಭುತ್ವ ಸಿದ್ಧಾಂತವನ್ನು ಮೈಗೂಡಿಸಿಕೊಂಡಿರುವುದೇ ಕಾರಣ. ಇನ್ನು ಧರ್ಮ ಭಾರತದಲ್ಲಿ ಬಹಳವಾಗಿ ಬೇರೂರಿದೆ ಮತ್ತು ಧಾರ್ಮಿಕ ವಿಷಯದಲ್ಲಿ ಅದು ಸದಾ ಒಂದು ಮಾರ್ಗದರ್ಶಿ. ಅದು ಎಂದೂ ಬೇರೆಯವರಿಂದ ಧರ್ಮವನ್ನು ಯಾಚಿಸಿಲ್ಲ

(At Religious level India has not been a recipient and she has been a giver) ಇದು ಪ್ರಪಂಚದಲ್ಲಿನ ಜೀವಂತ ಧರ್ಮ ಗಳಲ್ಲಿ ಅರ್ಧ ಭಾಗ ಭಾರತದಲ್ಲಿ ಜನ್ಮ ತಾಳಿದ್ದವು. ಸುಮಾರು ಅರ್ಧ ಭಾಗದಷ್ಟು ಮಾನವಜನಾಂಗ ಬೌದ್ಧಧರ್ಮವನ್ನು ಅವಲಂಬಿಸಿದ್ದಾರೆ. ವಿಶ್ವದ ಇತಿಹಾಸದಲ್ಲೂ ಮತ್ತು ರಾಜಕೀಯದಲ್ಲೂ ಭಾರತ ಪ್ರಬಲ ಶಕ್ತಿಯಾಗಿದೆ.

ವಿಶ್ವ ರಾಷ್ಟ್ರ ಕಟ್ಟುವ ಪ್ರಯೋಗದ ಮಾದರಿ ಅಕ್ಷರಶಃ ಭಾರತದಲ್ಲಿ ನಡೆದಿದೆ. ಇದನ್ನು ನಡೆಸಿದವರೆಂದರೆ ಭಾರತದವರೇ ಆದ ಮೌರ್ಯರು ಮತ್ತು ಗುಪ್ತರು ಹಾಗೂ ಮೊಘಲರು ಮತ್ತು ಬ್ರಿಟೀಷರು. ಪರಕೀಯರಾದ ಮೊಘಲರು ಮತ್ತು ಬ್ರಿಟೀಷರು ಭಾರತೀಯರ ಬೆಂಬಲವಿಲ್ಲದಿಲ್ಲದಿದ್ದಲ್ಲಿ ಇಷ್ಟು ಬೃಹತ್ ಪ್ರಮಾಣದ ರಾಷ್ಟ್ರ ನಿರ್ಮಾಣಮಾಡಲು ಸಾಧ್ಯವಾಗುತ್ತಿರಲಿಲ್ಲ,

ಇನ್ನು ಭಾರತವು ತನ್ನ ಸಾಮಾನ್ಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ರೀತಿ ಪ್ರಪಂಚಕ್ಕೆ ಒಂದು ಕುತೂಹಲಕಾರಿಯಾಗಿದೆ. ಏಕೆಂದರೆ ಭಾರತದ ಮಾರ್ಗ ಮತ್ತು ಭಾರತದ ಅನುಭವ ಜಗತ್ತಿಗೊಂದು ಉಪದೇಶದಾಯಕ. ಏಕೆಂದರೆ ಇತರ ದೇಶಗಳು ಸಹ ಈ ಸಮಸ್ಯೆಗಳನ್ನು ಎದುರಿಸುತ್ತಿವೆ. ನವ ಶಿಲಾಯುಗದಿಂದಲೂ ನಾಗರೀಕತೆ ಪೂರ್ಣವಾಗಿ ರೈತನ ಬೆನ್ನ ಮೇಲೆ ಹೇರಲ್ಪಟ್ಟಿದೆ. ಐದುಸಾವಿರ ವರ್ಷ ಗಳಿಂದಲೂ ರೈತ ಶೋಷಣೆಯ ಅಭ್ಯಾಸಕೊಳ್ಳಗಾಗಿ ನಿರ್ಲಿಪ್ತನಾಗಿದ್ದಾನೆ. ಇದು ಕೇವಲ ಕೆಲವೇ ಮಂದಿ ಪಟ್ಟಣವಾಸಿಗಳ ಸುಖ ಜೀವನಕ್ಕೆ ದಾರಿ ಮಾಡಿಕೊಟ್ಟಿದೆ. ಅನಾದಿಯಿಂದಲೂ ರೈತ ನಾಗರೀಕ ಸೌಲಭ್ಯಗಳಿಂದ ವಂಚಿತನಾಗಿದ್ದಾನೆ. ರೈತಾಪಿ ಜನರು ಉಪವಾಸ ನೀಗುವ ಮಟ್ಟದಲ್ಲಿ ಜೀವನ ಸಾಗಿಸಿಕೊಂಡು ಬರುತ್ತಾ ಹೆಚ್ಚು ವರಿ ಉತ್ಪಾದನೆಯನ್ನು ಒಂದು ನಾಗರಿಕತೆಯನ್ನು ನಿರ್ಮಿಸಲು ಅಥವಾ ಇತರ ನಾಗರಿಕತೆಯ ಸರ್ವನಾಶಕ್ಕೆ ಬಳಸುತ್ತಾ ಬರಲಾಗಿದೆ. ಕೃಷಿಕ ವರ್ಗ ಕಷ್ಟಜೀವನ ವನ್ನೇ ಸ್ವಾಗತಿಸುವುದನ್ನು ಕಲಿತು ಸುಖ ಜೀವನವನ್ನು ಬದಲಾಯಿಸಿಕೊಳ್ಳುವುದು ಸಾಧ್ಯವೆಂಬ ಕನಸು ಸಹಾ ಕಾಣಲಿಲ್ಲ, ನಾಗರಿಕತೆ ಇವರ ಮೇಲೆ ಒಂದು ಹೊರೆ ಯಂತೆ ಇದ್ದಿತು. ಇತ್ತೀಚಿನ ದಿನಗಳಲ್ಲಿ ಉತ್ಪಾದನೆಯಲ್ಲಿ ಹೊಸತಿರುವು ಪಡೆಯು ವವರೆಗೂ ಇವರ ಜೀವನದ ಸುಧಾರಣೆಯ ಸೂಚನೆ ಕಾಣಲಿಲ್ಲ.

ನಾಗರೀಕತೆಯು ರಾಜಕೀಯ ಮಹತ್ ಸಾಧನೆಯೆಂದರೆ ರೈತನ ಬೆಳೆಯಲ್ಲಿ ಕನಿಷ್ಠ ಪ್ರಮಾಣ ಅವನಿಗೆ ಬಿಟ್ಟು, ಉಳಿದ ಹೆಚ್ಚುವರಿಯ ನಾಗರೀಕರೆಂದು ಹೇಳಿ ಕೊಳುತ್ತಿರುವ ಶ್ರಮ ರಹಿತ ಅಲ್ಪ ಸಂಖ್ಯಾತ ನಗರವಾಸಿಗಳು ಒದಗಿಸುವುದಾಗಿದೆ. ಈ ಅಲ್ಪ ಸಂಖ್ಯಾತ ವರ್ಗ ಸಕಲ ಅನುಕೂಲಗಳನ್ನು ಪಡೆದು ಸೃಜನ ಶೀಲ ಕೃಷಿ

ಯಲ್ಲಿ ತೊಡಗಿರುತ್ತಾರೆ. ಶಿಲ್ಪ, ಸಂಗೀತ, ದೃಶ್ಯಕಲೆ, ಕಾವ್ಯ ಮುಂತಾದವುಗಳಲ್ಲಿನ ಸಾಧನೆಯೇ ನಾಗರಿಕತೆಯ ಕುರುಹುಗಳಾಗಿವೆ. ಈಚಿನ ಎರಡುನೂರು ವರ್ಷಗಳಿಂದ ಅಲ್ಪ ಸಂಖ್ಯಾತ ವರ್ಗದ ಗಮನ ತಾಂತ್ರಿಕ ಮುನ್ನಡೆಯತ್ತ ಸಾಗಿದೆ. ಅದರ ಸಾಧನೆ ಯಿಂದ ಸಮಾಜದ ಎಲ್ಲ ವರ್ಗದ ಜನರಿಗೂ ಅನುಕೂಲ ಮಾಡಿಕೊಡುವುದಾಗಿದೆ.

ಸತತವಾಗಿ ಶೋಷಣೆಗೊಳಗಾದ ಕೃಷಿಕ ವರ್ಗಕ್ಕೆ ಸಹಾಯ ಮಾಡುವ ಸದುದ್ದೇಶದ ಪ್ರಯತ್ನ ಭಾರತದಲ್ಲಿ ನಡೆದಿದೆ. ಇದಕ್ಕೆ ದೃಷ್ಟಾಂತವಾಗಿ ಸಾಮೂಹಿಕ ಅಭಿವೃದ್ಧಿ ಯೋಜನೆ (C·D·P.) ಯನ್ನು ತೆಗೆದುಕೊಳ್ಳಬಹುದು. ಭಾರಥ ತೆಗೆದು ಕೊಂಡ ಈ ಒಂದು ಹೆಜ್ಜೆ ಜಗತ್ತಿನಾದ್ಯಂತ ಶೋಷಣೆಗೊಳಗಿರುವ ರೈತ ಜನಾಂಗಕ್ಕೆ ಒಂದು ಶುಭ ಸೂಚಕವಾಗಿದೆ.

ಎರಡನೆಯ ಜ್ವಲಂತ ಸಮಸ್ಯೆಯೆಂದರೆ ಜನ ಸಂಖ್ಯಾಸ್ಫೋಟ ವಿಜ್ಞಾನದ ಪ್ರಗತಿಯಿಂದಾಗಿ ಮರಣ ಪ್ರಮಾಣವು ಸಾಕಷ್ಟು ಕಡಿಮೆಯಾಗಿ ಜನನ ಪ್ರಮಾಣ ನಿಯಂತ್ರಿಸಲಾಗದೆ ಅತಿ ಹೆಚ್ಚಾಗಿದೆ. ಇಂತಹ ಸಮಸ್ಯೆಯನ್ನು ಜನರ ಮೂಢ ನಂಬಿಕೆಗಳಿಗೆ ಪೆಟ್ಟಾಗದಂತೆ ಭಾರತ ಪರಿಹಸುವ ರೀತಿ ಪ್ರಪಂಚದಾದ್ಯಂತ ರಾಷ್ಟ್ರಗಳಿಗೆ ಸ್ಫೂರ್ತಿದಾಯಕವಾಗಿದೆ.

ಮೂರು ಸಾವಿರ ವರ್ಷಗಳಿಂದ ಇರುವ ಮತ್ತೊಂದು ಭಾರತದ ಹಾಗೂ ವಿಶ್ವ-ದಾದ್ಯಂತಇರುವ ಸಮಸ್ಯೆ ಎದಂರೆ ಜಾತಿ ವರ್ಣದ್ವೇಷ. ಕಳೆದ ಮೂರೂವರೆ ಶತಮಾನಗಳ ಅವಧಿಯಲ್ಲಿ ಪಾಶ್ಚಾತ್ಯರ ಆಳ್ವಿಕೆ ಸಾಗರೋತ್ತರ ದೇಶಗಳಲ್ಲಿ ಭಾಷೆ ಮತ್ತು ಸಂಸ್ಕೃತಿ ಗಳ ಮೇಲೆ ತೀವ್ರ ಪ್ರಭಾವ ಉಂಟು ಮಾಡಿದೆ- ಉದಾಹರಣೆಗೆ-ಡಚ್ಚರು ಮತ್ತು ಪೋರ್ಚುಗೀಸರು ದಕ್ಷಿಣ ಆಫ್ರಿಕಾದಲ್ಲಿ ಮತ್ತು ಇತರ ದೇಶಗಳಲ್ಲಿ ವರ್ಣಭೇದ ನೀತಿಗೆ ಕಾರಣರಾಗಿದ್ದಾರೆ. ಭಾರತದ ದ್ರಾವಿಡ ಜನಾಂಗವನ್ನು ಗೆದ್ದ ಆರ್ಯ ಜನಾಂಗ ತನ್ನ ಸಂಸ್ಕೃತಿಯನ್ನು ದ್ರಾವಿಡರ ಮೇಲೆ ಹೇರಿತು. ಹೀಗೆ ಎರಡು ಜನಾಂಗಗಳ ಸಂಸ್ಕೃತಿಗಳ ಮಿಲನ ಉಂಟಾಯಿತು. ಆದೇ ರೀತಿ ಅಮೇರಿಕಾದಲ್ಲಿ ವರ್ಣ ದ್ವೇಷ 1861 ರಿಂದ 65 ರವರೆಗೆ ಅಂತರ್ ಯುದ್ಧಕ್ಕೆ ಕಾರಣವಾಯಿತು. ಭಾರತದಲ್ಲಿ ಬುದ್ಧನ ಕಾಲದಲ್ಲಿ ಜಾತಿ ಪದ್ಧತಿ ವಿರುದ್ಧ ನಡೆದ ಪ್ರತಿಭಟನೆ ಬ್ರಿಟೀಷರ ಕಾಲದಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ಹೊಸತಿರುವು ಪಡೆಯಿತು. ವರ್ಣಭೇದ ನಿರ್ಮೂಲನೆಗೆ ಬುದ್ಧ ಮತ್ತು ಗಾಂಧೀಜಿಯವರ ಮೂಲಕ ಭಾರತದ ವಾಣಿ ವಿಶ್ವಕ್ಕೆ ಪ್ರಭಾವಕಾರಿಯಾಗಿದೆ. ಇಂತಹ ಜಾತೀಯ,ಜನಾಂಗೀಯ ಸಮಸ್ಯೆಗಳಿಗೆ ಸರ್ಕಾರಿ ಕಾಯಿದೆಗಳಿಗಿಂತಲೂ ಹೃದಯ ಪರಿವರ್ತನೆಯಿಂದ ಹೆಚ್ಚು ಪರಿಣಾಮಕಾರಿಯಾಗ ಬಹುದು. .ಈಹೃದಯ ಪರಿವರ್ತನೆಯ ಬೃಹತ್ ಕಾರ್ಯ ಜನತೆಯ ಸ್ವಶಿಕ್ಷಣದಿಂದ ಮಾತ್ರ ಸಾಧ್ಯ.

ಭಾರತದ ಮತ್ತು ವಿಶ್ವದ ನಾಲ್ಕನೆಯ ಸಮಸ್ಯೆಯೆಂದರೆ ಭಾಷಾವಾರು ರಾಜ್ಯಗಳ ವಿಂಗಡಣೆ.–ಈ ಸಮಸ್ಯೆ ಪ್ರಜಾಪ್ರಭುತ್ವದ ಬೆಳವಣಿಗೆಯ ಒಂದು ಪ್ರತಿ ಫಲವಾಗಿದೆ. ಇಂತಹ ಸಮಸ್ಯೆಗಳನ್ನು ಎದುರಿಸುವುದಲ್ಲಿ ಭಾರತೀಯರು ಹೊಂದಿರುವ ಸದ್ಗುಣ- ಅವರ ದ್ವೇಷ ಮುಕ್ತ ಸ್ವಭಾವ. ಇತ್ತೀಚಿನ ಉದಾಹರಣೆಯಲ್ಲಿ ಬ್ರಿಟಿಷರ ವಿರುದ್ಧ ದ್ವೇಷರಹಿತವಾಗಿ, ಶಾಂತಿಯುತವಾಗಿ ಹೋರಾಡಿ ಮತ್ತು ಸ್ವಾತಂತ್ರ್ಯಗಳಿಸಿದ ನಂತರ ಹಳೇ ದ್ವೇಷವನ್ನು ಮರೆತು ಶತ್ರುವಾದ ಬ್ರಿಟಿಷರೊಂದಿಗೆ ಮೈತ್ರಿಯುತ ಸಂಬಂಧ ಸ್ಥಾಪಿಸಿ ಕೊಂಡಿದೆ.

ಆಂಗ್ಲರು ಮತ್ತು ಮೊಗಲರು ಭಾರತದ ಮೇಲೆ ದಾಳಿ ಮಾಡಿದವರು, ಆದರೂ ಸಹ ಭಾರತದ ಮುಸ್ಲಿಮರಾದ ಆಜಾದ್‌ರವರಿಗೆ ಗೌರವ ಸಲ್ಲಿಸಲು ಒಬ್ಬ ಆಂಗ್ಲ ವಿದ್ವಾಂಸನನ್ನು ಕರೆಸಿ ಉಪನ್ಯಾಸ ಮಾಲಿಕೆಯನ್ನು ಏರ್ಪಡಿಸಿರುವುದು ಭಾರತೀಯರ ಜಾತಿಯ ಮುಕ್ತ ಭಾವನೆಗೆ ಉದಾಹರಣೆಯಾಗಿದೆ.

ಆಂಗ್ಲರ ಆಡಳಿತವನ್ನು ಭಾರತದಲ್ಲಿ ಮುಂದುವರೆಸಿ ಕೊಂಡು ಹೋಗಲು ಅಸಾಧ್ಯವಾಗಿ ಮಾಡಿದ ಅಸಾಧಾರಣ ವ್ಯಕ್ತಿ ಗಾಂಧೀಜಿ. ಸ್ವಾತಂತ್ರ್ಯ ಹೋರಾಟ ವನ್ನು ಧರ್ಮದ ಹಾದಿಯಲ್ಲಿಟ್ಟ ಗಾಂಧಿ ಭಾರತ ಮತ್ತು ಬ್ರಿಟನ್ ಎರಡನ್ನು ಏಕ ಕಾಲದಲ್ಲಿ ರಕ್ತ ಕ್ರಾಂತಿಯಿಂದ ಕಾಪಾಡಿದರು. ಈ ದಿಸೆಯಲ್ಲಿ ಗಾಂಧೀಜಿಯವರು ಬ್ರಿಟನ್ನಿಗೆ ಮಾಡಿದ ಸೇವೆ ಭಾರತಕ್ಕೆ ಮಾಡಿದ ಸೇವೆಗಿಂತ ಯಾವುದೇ ರೀತಿಯ- ಲ್ಲಿಯೂ ಕಡಿಮೆಯಾಗಿಲ್ಲವೆಂದರೆ ಉತ್ಪ್ರೇಕ್ಷೆಯಾಗಲಾರದು.

ಅಹಿಂಸಾ ಕ್ರಾಂತಿ ಭಾರತದ ಒಂದು ಮಹತ್ ಸಾಧನೆ ಈಬಂದು ಸಿದ್ಧಾಂತವನ್ನು ಭಾರತ ತನ್ನ ಆಂತರಿಕ ಸಮಸ್ಯೆಗಳ ಪರಿಹಾರಕ್ಕೆ ಉಪಯೋಗಿಸುತ್ತಿರುವುದಕ್ಕೆ "ಭೂಧಾನ ಚಳುವಳಿ" ಒಂದು ಉದಾಹೆರಣೆಯಾಗಿದೆ. ಇತಿಹಾಸ ಪುಟಗಳನ್ನು ಹಿಂದಕ್ಕೆ ತೆರೆದು ನೋಡಿದಲ್ಲಿ ಆಶೋಕಚಕ್ರವರ್ತಿ ಅಹಿಂಸಾ ಸಿದ್ಧಾಂತ ಅನುಯಾಯಿಯಾಗಿ ಸೈನ್ಯದ ಆಕ್ರಮಣಕ್ಕೆ ಬದಲು ಧರ್ಮ ಪ್ರಚಾರಕ್ಕೆಗೊಂಡಿದ್ದು ಕಂಡುಬರುತ್ತದೆ.

ಅಣು ಸ್ಫೋಟ ಯುಗದಲ್ಲಿ ನಾವಿನ್ನೂ ಬದುಕಿದ್ದೇವೆ ಮತ್ತು ಬದುಕಲಿದ್ದೇವೆ. ಜಗತ್ತನ್ನೇ ನುಂಗಿ ಬಿಡುವ ಈ ಪರಮಾಣುವಿನ ಚಂಡ ಮಾರುತದಲ್ಲಿ ಮಾನವ ಜನಾಂಗ ಸರ್ವನಾಶದಿಂದ ಉಳಿಯಬೇಕಾದರೆ ಅದು ಅಹಿಂಸಾ ಸಿದ್ಧಾಂತವನ್ನು ಅನುಸರಿಸಲೇಬೇಕು. ನೆರೆ ರಾಷ್ಟ್ರಗಳಿಂದ ತೊಂದರೆ ಇದ್ದರೂ ಸಹ ಗಾಂಧೀಜಿ ಮತ್ತು ಇತಿಹಾಸಕ್ಕೆ ಋಣಿಯಾಗಿರುವ ಭಾರತ ವಿಶ್ವಕ್ಕೆ ಅಹಿಂಸಾ ಸಿದ್ಧಾಂತದ ಮಾದರಿಯಾಗಿದೆ.

ಅಹಿಂಸೆ ಎನ್ನುವುದು ಒಂದು ಮನೋಸ್ಥಿತಿ. ಅದು ನೈತಿಕ ಆದರ್ಶದಿಂದ ಪ್ರೇರಣೆಯಾದದ್ದು. ಈ ನೈತಿಕ ಆದರ್ಶ ಭೌತಿಕ ದೃಷ್ಟಿಗೆ ತಳಕುಗೊಂಡಿದೆ. ಸತ್ಯ ಮತ್ತು ಮುಕ್ತಿಗೆ ವಿವಿಧ ಪದಗಳಿವೆ. ಸತ್ಯವೆಂದರೆ ಪರಿಪಕ್ವವಾದ ಆಧ್ಯಾತ್ಮಿಕ ಅರಿವು. ದಿವ್ಯದರ್ಶನದಲ್ಲಿಕಂಡ ಸಾಮರಸ್ಯವೇ ಮುಕ್ತಿ.

ಸತ್ಯದ ಬಗ್ಗೆ ತಾಳುವ ವಿಶಾಲವಾದ ಮನೋಭಾವವೇಭಾರತೀಯ ಲಕ್ಷಣ. ಈ ವಿಶಾಲವಾದ ಭಾರತೀಯರ ಧಾರ್ಮಿಕ ಮನೋಭಾವನೆಯನ್ನು ಬೌದ್ಧ ಧರ್ಮವು ಹಂಚಿಕೊಂಡಿದೆ. ವಿಶ್ವದಾದ್ಯಂತ ಒಂದುಕಾದಲ್ಲಿದ್ದ ವಿಶಾಲ ಹೃದಯತೆ ವಿಶಾಲ ಧಾರ್ಮಿಕ ಮನೋಭಾವ ಉಳಿಸಿಕೊಂಡು ಹೋಗುವುದು ಭಾರತದ ಕರ್ತವ್ಯವಾಗಿದೆ. ಭಾರತವು ಹಿಂದೂಧರ್ಮವನ್ನು ರಾಷ್ಟ್ರಧರ್ಮವನ್ನಾಗಿ ಮಾಡಿದೆ ಜಾತ್ಯಾತೀತ ರಾಷ್ಟ್ರವನ್ನು ಸ್ಥಾಪಿಸಿ ಎಲ್ಲ ಧರ್ಮದವರಿಗೂ ಸಮಾನತೆಯನ್ನು ನೀಡಿದೆ.

ಭಾರತದ ಪ್ರಾಚ್ಯ ಸಂಶೋಧನಾ ಇಲಾಖೆ ತಾಜ್‌ಮಹಲ್ ಮತ್ತು ಆಗ್ರ ಕೋಟೆಯನ್ನು ನೋಡಿಕೊಳ್ಳುತ್ತಿರುವ ರೀತಿಗೆ ಇಸ್ಲಾಮಿಕ್ ರಾಷ್ಟ್ರಗಳೇ ಏಕೆ ವಿಶ್ವದ ಎಲ್ಲ ರಾಷ್ಟ್ರಗಳೂ ಋಣಿಯಾಗಿರಬೇಕು. ಭಾರತೀಯರ ವೈವಿಧ್ಯತೆಯ ನೋಟ ವಿಶ್ವಕ್ಕೆ ಮಹತ್ವದ್ದಾಗಿದೆ. ರಾಷ್ಟ್ರಗಳು ಭೌಗೋಳಿಕವಾಗಿ ಹತ್ತಿರವಿದ್ದರೂ ಮಾನಸಿಕವಾಗಿ ಅಂತರವಾಗಿರುವ ಈ ಅಪಾಯದ ಕಾಲದಲ್ಲಿ ನೆರೆ ರಾಷ್ಟ್ರಗಳ ಜನರನ್ನು ವಿಶ್ವಮಾನವ ಕುಟುಂಬದ ಭಾರತದ ಅತ್ಯದ್ಭುತ ಸ್ಥಾಪನೆಯಾದ "ವೈವಿಧ್ಯತೆಯಲ್ಲಿ ಐಕ್ಯತೆ" ವಿಶ್ವದಲ್ಲಿ ಪ್ರಮುಖವಾಗಿ ಎದ್ದು ಕಾಣುತ್ತಿವೆ.

ಕೊನೆಯದಾಗಿ ಗಾಂಧೀಜಿಯವರು ದಿನ ನಿತ್ಯದ ಕಾರ್ಯಕ್ರಮಗಳ ಒತ್ತಡಗಳ ನಡುವೆಯೂ ಆಧ್ಯಾತ್ಮ ಚಿಂತನೆಗೆ (ಧ್ಯಾನಕ್ಕೆ) ಬಿಡುವು ಮಾಡಿಕೊಳ್ಳುತ್ತಿದ್ದರು. ಅವರ ಆಧ್ಯಾತ್ಮಿಕ ಸಾಧನೆ ಭಾರತೀಯ ಪರಂಪರೆಯ ಪ್ರತೀಕ. ದೈನಂದಿನ ಬದುಕಿನ ಚಟುವಟಿಕೆಗಳೇ ಆಧ್ಯಾತ್ಮಿಕ ಚಟುವಟಿಕೆಗಳಿಗೆ ಮೂಲವೆಂಬುದನ್ನು ಗಾಂಧೀಜಿಯವರು ಪ್ರಯೋಗದಿಂದ ಸಾಬೀತು ಪಡಿಸಿದ್ದಾರೆ. ಇಂತಹ ಪ್ರೇರಣೆ ಅವರ ಪ್ರಾಯೋಗಿಕ ಬದುಕಿಗೆ ಫಲ ಕೊಟ್ಟಿತೇ ಹೊರತು ಬದುಕನ್ನು ಎಂದೂ ಅಸ್ಥವ್ಯಸ್ಥ ಗೊಳಿಸಲಿಲ್ಲ. ಗಾಂಧೀಜಿ ತೋರಿದ ಮಾರ್ಗ ಇಂದಿನ ಜಗತ್ತಿಗೆ ಭಾರತ ಕೊಡ ಬಹುದಾದ ದಾರಿ ದೀಪವಾಗಿದೆ. ಭಾರತದ ಈ ಆಧ್ಯಾತ್ಮಿಕ ಕೊಡುಗೆ ಮಾನವನನ್ನು ಹೆಚ್ಚು ಮಾನವೀಯತೆ ಉಳ್ಳವನನ್ನಾಗಿ ಮಾಡಿ ಮನುಷ್ಯನನ್ನು ಸ್ವಯಂ ನಾಶದಿಂದ ರಕ್ಷಿಸುತ್ತದೆ.

ಮೂಲ ; ಆರ್ನಾಲ್ಡ್ ಟಾಯಿನ್‌ಬೀ.

# ಬಸವಣ್ಣನವರ ದೃಷ್ಟಿಯಲ್ಲಿ ಸಮಾನತೆ

**ಶರಣರ ಸಂದೇಶ**

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬಜ್ಯೋತಿಯ ಮುಟ್ಟಿಸಲು
ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನಪ್ರಕಾಶ.
ಆ ಬೆಳಗಿನೊಳಗೊಪ್ಪುತಿರ್ದರಯ್ಯ
ಅಸಂಖ್ಯಾತ ಭಕ್ತಮಹಾಗಣಂಗಳು.
ಶಿವಭಕ್ತರಿರ್ದ ಕ್ಷೇತ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೇ?
ಶಿವಭಕ್ತರಿರ್ದ ದೇಶವು ಪಾವನವೆಂಬುದು ಹುಸಿಯೇ
ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು
ಬದುಕಿದೆ ಕಾಣಾ ಸಿದ್ಧರಾಮಯ್ಯಾ

– ಪ್ರಭುದೇವರು

ಹನ್ನೆರಡನೆಯ ಶತಮಾನ ಅಣ್ಣ ಬಸವಣ್ಣ ತನ್ನ ಕಾಲಕ್ಕೆ ಮೀರಿಸಮಾರು ಎಂಟುನೂರು ವರ್ಷ ಮುಂದಿನ ಇಪ್ಪತ್ತನೆಯ ಶತಮಾನದ ವಿವರಗಳನ್ನು ಹೊಂದಿದ್ದುದು ಆತನ ದೂರದೃಷ್ಟಿಗೆ ಸಾಕ್ಷಿ. ಆತ ದಾರ್ಶನಿಕ. ವಿಚಾರಗಳು ಜಾಗತಿಕ ಮನ್ನಣೆ ಪಡೆದಿವೆ, ಆತನ ಹೊಸ ವಿಚಾರಗಳನ್ನು ಹೊತ್ತ ವೀರಶೈವ ಧರ್ಮ ವಿಶ್ವಧರ್ಮ ಎನಿಸಿದೆ.

ಸಮಾಜದ ಸರ್ವರಂಗದಲ್ಲಿ ವಿಚಾರ ಕ್ರಾಂತಿಗೈದ ಬಸವಣ್ಣ ಹೊಸ ಸಮಾಜ ರಚನೆಗೆ ರೂವಾರಿಯಾದ. ಜಿಡ್ಡುಗಟ್ಟಿದ ಗೊಡ್ಡು ಸಂಪ್ರದಾಯಗಳನ್ನು ತನ್ನ ಕ್ರಾಂತಿಕಾರಿ ವಿಚಾರಗಳಿಂದ ಉಜ್ಜಿ ಸಮಾಜಕ್ಕೆ ಶುದ್ಧೀಕರಿಸಿ ನವಸಮಾಜ ಕಟ್ಟಿದ– ಇಡೀ ಜಗತ್ತಿನಲ್ಲಿಯೇ ಆದರ್ಶ ಪ್ರಾಯವಾಗಿರುವಂತೆ.

ಬಸವಣ್ಣನ ಘನ ಉದ್ದೇಶ ಬದುಕಬೇಕೆನ್ನುವುದು. ಅದು ಬದುಕಲು ಬೇಕಾಗುವಂಥ ಪರಿಸರ, ಸನ್ನಿವೇಶ, ಸಾಮುಗ್ರಿಗಳನ್ನು ಆತ ಸಮಾಜಕ್ಕೆ ಒದಗಿಸಿದ. ಅಂಥ ಹಲವಾರು ವಿಚಾರಗಳಲ್ಲಿ ಆತನ ಸಮಾನತಾ ದೃಷ್ಟಿಯೂ ಒಂದು. ಬಸವಣ್ಣ ಸಮತಾವಾದಿ, ಸಮಾನತಾವಾದಿ.

## ಅಸಮಾನತೆಯ ವಿರುದ್ಧ ಹೋರಾಟ

ನೈಸರ್ಗಿಕವಾಗಿ ಏನೇ ಇದ್ದರೂ ಬದುಕಿನ ವಿವಿಧ ರಂಗಗಳಲ್ಲಿ ಸರಿಸಮಾನರು ಎಂಬ ವಿಚಾರವನ್ನು ಜಗತ್ತಿನಲ್ಲಿ ಪ್ರಥಮವಾಗಿ ಬಿತ್ತಿದವನು ಬುದ್ಧ. ಬುದ್ಧನ ನಂತರ ಎದ್ದು ಕಾಣುವ ವ್ಯಕ್ತಿ ಬಸವಣ್ಣ. ಈ ಹಾದಿಯಲ್ಲಿ ಆತ ಸಮಾನತೆಯ ಕ್ರಾಂತಿಯನ್ನು ಮುಂದುವರಿಸಿದ. ಆತನ ಕ್ರಾಂತಿ ಸಮಗ್ರಕ್ರಾಂತಿ ಎನಿಸಿತು. ಜೀವನದ ಪ್ರತಿ ರಂಗದಲ್ಲಿ ಸಮಾನತೆಯನ್ನು ತರುವುದು ಆತನ ಮೂಲ ಉದ್ದೇಶವಾಗಿತ್ತು. ಗುರಿಯಾಗಿತ್ತು. ಈ ಮಾರ್ಗವೇ ವೀರಶೈವ ಧರ್ಮ ಎನಿಸಿತು. ಆಗಿನ ಆಳರಸರು ಇದನ್ನು ಸ್ವೀಕರಿಸಿ ಪ್ರಚಾರಗೈದಿದ್ದರೆ ಆಗಲೆ ಇದು ಜಾಗತಿಕ ಧರ್ಮ ಅಥವಾ ವಿಶ್ವಧರ್ಮವಾಗುತ್ತಿತ್ತು. ಆದರೆ ದುರ್ದೈವವೆಂದರೆ ಧರ್ಮಾಂಧರು ಇದಕ್ಕೆ ವಿರೋಧ ಒಡ್ಡಿದರು. ಕಲ್ಯಾಣದಲ್ಲಿ ಕ್ರಾಂತಿಯಾಯಿತು. ಆಳರಸ ಬಿಜ್ಜಳನ ಕೊಲೆಯಾಯಿತು. ಶಿವಶರಣರು ದಿಕ್ಕೆಟ್ಟು ಓಡಿದರು. ತಮ್ಮ ಸಾಹಿತ್ಯ ಧರ್ಮ ಉಳಿಸಿ, ಬೆಳೆಸಲು. ಸಮಾನತೆಗಾಗಿ ನಿಜ ಅರ್ಥದಲ್ಲಿ ಕ್ರಾಂತಿಯಾದದ್ದು ಇಡೀ ಭಾರತದ ಇತಿಹಾಸದಲ್ಲಿ ಇದುಪ್ರಥಮ. ಈದೃಷ್ಟಿಯಲ್ಲಿ ಬಸವ ಭಾರತದ ಪ್ರಥಮಕ್ರಾಂತಿಕಾರಿ.

## ಬಸವಣ್ಣನವರ ಧಾರ್ಮಿಕ ಸಮಾನತೆ

ಬಸವಣ್ಣನು ಧರ್ಮದ ಬಗೆಗೆ ತನ್ನದೇ ಆದ ವ್ಯಾಖ್ಯೆ ನೀಡಿರುವನು :

ದಯವಿಲ್ಲದ ಧರ್ಮವದೇವುದಯ್ಯ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ ;
ದಯವೇ ಧರ್ಮದ ಮೂಲವಯ್ಯಾ
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ

ಬಸವಣ್ಣನ ದೃಷ್ಟಿಯಲ್ಲಿ ದಯವಿಲ್ಲದ್ದು ಧರ್ಮವೇ ಅಲ್ಲ. ಅದೇ ರೀತಿ ದೇವರ ಹೆಸರಿನಲ್ಲಿ ಹಾಗೂ ಆಹಾರಕ್ಕಾಗಿ ಪ್ರಾಣಿಗಳನ್ನು ಹಿಂಸಿಸುವ ಧರ್ಮಗಳು ಬಸವಣ್ಣನ ಪ್ರಕಾರ ಅಲ್ಲ. ಸಕಲ ಜೀವಿಗಳಿಗೂ ಲೇಸ ಬಯಸುವವ ಬಸವಣ್ಣ. ಮಾನವರ ಹಿತಕ್ಕಾಗಿ ಅನ್ಯ ಪ್ರಾಣಿಗಳನ್ನು ಹಿಂಸಿಸುವ ವಿಚಾರವೂ ಬಸವನಿಗಿಲ್ಲ. ಮಾನವ-ಕೋಟಿಗಾಗಿ ಒಂದೆರಡು ಸಾಕುಪ್ರಾಣಿಗಳನ್ನು ಬಲಿಕೊಡುವ ದೃಷ್ಟಿಯೂ ಬಸವನಿಗೆ ಇಲ್ಲ. ಒಟ್ಟನಲ್ಲಿ ದಯವಿಲ್ಲದ ಧರ್ಮ ದೇವಸಮ್ಮತವಲ್ಲ ಎನ್ನುವುದು ಅವನ ನಿಲುವು.

"ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ"-ಎನ್ನುವಲ್ಲಿ ಮಾನವೀಯತೆ ಇದೆ, ಸಮಾನತೆ ಇದೆ. ಬಸವನದು ದೇವರಿಗಾಗಿ ಧರ್ಮವಲ್ಲ. ದೇವಸಂಪತ್ತಿಗಾಗಿ ಹಿಂಸೆ, ಹೋಮ, ಹವನ, ಮಾಡುವವನಲ್ಲ ಬಸವ. ಇಡೀ ಭರತಖಂಡದ ಇತಿಹಾಸದಲ್ಲಿ ಇಂಥ ಮಾನವೀಯ ಧರ್ಮವನ್ನು ಮೆರೆದವರಲ್ಲಿ ಪ್ರಥಮರು ಬಹುಶಃ ಬುದ್ಧ ಬಸವರಿಬ್ಬರೇ. ಹರಿಹರನ ಮಾತಿನಲ್ಲಿ ಹೇಳಬೇಕಾದರೆ "ಬಸವನ ಬಟ್ಟೆ (ದಾರಿ)ಯೇ ಬಟ್ಟೆ"

ಅಧ್ಯಾತ್ಮಿಯು ಸಮಾನ ದೃಷ್ಟಿಯುಳ್ಳವ. ಅದು ಕಾರಣ ಬಸವನದು ಸಮಾನತೆಯ ದೃಷ್ಟಿ. ಆಧ್ಯಾತ್ಮಿಕತೆಯಲ್ಲಿಯೂ ಆತ ಏಕತೆಯನ್ನು ತಂದನು. ಮೂಢನಂಬಿಕೆಯ ಹಲವು ದೈವಗಳನ್ನು ಅಲ್ಲಗಳೆದು ಎಲ್ಲರ ಹೃತ್ಕಮಲದಲ್ಲಿ ಇಷ್ಟ ಲಿಂಗವನ್ನು ಪ್ರತಿಷ್ಠಾಪಿಸಿದುದು ಬಸವಣ್ಣನ ವೈಶಿಷ್ಟ್ಯ. ಈ ವಚನಗಳನ್ನು ನೋಡಿ

ಮಡಿಕೆ ದೈವ, ಮೊರ, ಬೀದಿಯ ಕಲ್ಲು ದೈವ
ಹಣಿಗೆ ದೈವ, ಬಿಲ್ಲ ನಾರಿ ದೈವ, ಕಾಣಿರೋ.
ಕೊಳಗ ದೈವ ಗಿಣ್ಣಿಲು ದೈವ ಕಾಣಿರೋ
ದೈವ ದೈವವೆಂದು ಕಾಲಿಡಲಿಂಬಿಲ್ಲಾ !
ದೈವನೊಬ್ಬನೇ ಕೂಡಲ ಸಂಗಮದೇವ....

ದೇವನೊಬ್ಬ, ನಾಮ ಹಲವು,
ಪರಮ ಪತಿವ್ರತೆಗೆ ಗಂಡನೊಬ್ಬ ;
ಮತ್ತೊಂದಕ್ಕೆರಗಿದರೆ ಕಿವಿ ಮೂಗು ಕೊಯ್ವನು !
ಹಲವು ದೇವರ ಎಂಜಲ ತಿಂಬವರನೇನೆಂಬೆ,
ಕೂಡಲಸಂಗಮ ದೇವಾ ?

ಸ್ಥಾವರ ಲಿಂಗವು ಅಸಮಾನತೆಗೆ ಎಡೆ ಮಾಡಿತ್ತು. ದಲಿತರು ಮತ್ತು ಹೆಣ್ಣುಮಕ್ಕಳಿಗೆ ಗುಡಿಯಲ್ಲಿ ಪ್ರವೇಶವಿರಲಿಲ್ಲ. ಇದರ ಸೇಡನ್ನು ಬಸವಣ್ಣ ಇಷ್ಟ ಲಿಂಗದ ಮುಖಾಂತರ ತೀರಿಸಿಕೊಂಡ. ಗುಡಿಯಲ್ಲಿಯ ಸ್ಥಾವರಲಿಂಗವನ್ನು ಇಷ್ಟ ಲಿಂಗವನ್ನಾಗಿ ಮಾರ್ಪಡಿಸಿ ಭಕ್ತನ ಎದೆಗೆ ಕಟ್ಟಿದ. ದಲಿತರು ಈಗ ಗುಡಿಗೆ ಹೋಗಬೇಕಾಗಿಲ್ಲ. ಗುಡಿಯಲ್ಲಿದ್ದವನೇ ಈಗ ಎದ್ದು ಬಂದು ಭಕ್ತನ ಕೊರಳಲ್ಲಿರುವ, ಈರೀತಿ ಜಗವರಿಯದ ಮಹತ್ಕಾರ್ಯವನ್ನು ಮಾಡಿ ಬಸವನು ದಲಿತೋದ್ಧಾರ ಮಾಡಿದ. ಸ್ಥಾವರಲಿಂಗ ಬಸವನಿಂದ ಇಷ್ಟಲಿಂಗವು ಏಕತೆ ಮತ್ತು ಸಮಾನತೆಯ ದ್ಯೋತಕ. ಅದು ಭಕ್ತನ ಎದೆಯನ್ನೇ ಗರ್ಭಗುಡಿ ಮಾಡಿಕೊಂಡಿತು.

—ಸತ್ಯ ಶುದ್ಧ ಕಾಯಕದ ಕೃಷೆ,

# ಇತಿಹಾಸಕಾರ ಪಾದ್ರಿ ಹೆರಾಸ್ [1888—1956]

ಎಂ. ಎ. ಊರ್ಮಿಳಾದೇವಿ, ರೀಡರ್, ಸಿದ್ಧಗಂಗಾ ಕಾಲೇಜ್, ತುಮಕೂರು.

ಬಾರ್ಸಿಲೋನಾದಲ್ಲಿ 1888ರಲ್ಲಿ ಜನಿಸಿದ ಸ್ಪೈನಿನ ಪಾದ್ರಿ ಹೆರಾಸರು. 1922 ರಲ್ಲಿ ತಮ್ಮ 34 ನೇ ವಯಸ್ಸಿನಲ್ಲಿ ಬೊಂಬಾಯಿಗೆ ಬಂದರು. ಇವರು ಅಧ್ಯಾಪಕ ವೃತ್ತಿಯನ್ನು ಕೈಗೊಂಡರು.

ಭಾರತ ಇತಿಹಾಸ ಮತ್ತು ಸಂಸ್ಕೃತಿ ಹೆರಾಸರನ್ನು ಹೆಚ್ಚು ಆಕರ್ಶಿಸಿತು. "ಭಾರತ' ಹೆರಾಸರ ಅಧ್ಯಯನದ ಪ್ರಿಯ ವಸ್ತುವಾಯಿತು.

ಭಾರತ ಇತಿಹಾಸದ ಬಗ್ಗೆ ಬೊಂಬಾಯಿಯ ಸೇಂಟ್ ಜೆವಿಯರ್ ಕಾಲೇಜಿನ ಪ್ರಿನ್ಸಿಪಾಲರಾದ ಫಾದರ್ ಬಟ್ಲರ್ ಮತ್ತು ಹೆರಾಸರ ನಡುವೆ ಜರುಗಿದ ಸಂಭಾಷಣೆ ಕುತೂಹಲಕಾರಿಯಾಗಿದೆ.

—ಏನು ಬೋಧಿಸುತ್ತೀರಿ ? ಬಟ್ಲರರ ಪ್ರಶ್ನೆ.

ಭಾರತೀಯ ಇತಿಹಾಸ-ಹೆರಾಸರ ಉತ್ತರ. ಭಾರತೀಯ ಇತಿಹಾಸ ಬಗ್ಗೆ ನಿಮಗೇನು ತಿಳಿದಿದೆ? -ಬಟ್ಲರರ ಮರುಪ್ರಶ್ನೆ.

ಏನು ಗೊತ್ತಿಲ್ಲ ಅಧ್ಯಯನ ಮಾಡಿ ಬೋಧಿಸುವೆ ಹೆರಾಸರ ಉತ್ತರ. ಇದು ಭಾರತೀಯ ಇತಿಹಾಸದ ಬಗ್ಗೆ ಹೆರಾಸರಿಗಿದ್ದ ಕುತೂಹಲವನ್ನು ಆಸಕ್ತಿಯನ್ನು ವ್ಯಕ್ತಪಡಿಸುತ್ತದೆ.

ಭಾರತೀಯ ಇತಿಹಾಸದಲ್ಲಿ ಅವರಿಗಿದ್ದ ಆಸಕ್ತಿ ಅಪಾರ. ಭಾರತೀಯ ಇತಿಹಾಸದ ಗಣಿಯನ್ನು ತೆರೆದಿಟ್ಟ ಕೀರ್ತಿ ಹೆರಾಸರಿಗೆ ಸಲ್ಲುತ್ತದೆ.

ಹೆರಾಸರ ಮೊದಲ ಪುಸ್ತಕವಾದ "ಭಾರತ ಪ್ರಾಕ್ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ" ಪ್ರಾಚ್ಯಶಾಸ್ತ್ರವನ್ನಾಧರಿಸಿದೆ.

ಈ ಪುಸ್ತಕದಲ್ಲಿ ನಲಂದ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ, ನಂದರು ಮತ್ತು ಯುವರ್ಾಜುವಾಂಗನ ಬಗ್ಗೆ ವಿವರಣೆ ಇದೆ.

ಇದಲ್ಲದೆ ಹೆರಾಸರು ಹದಿಮೂರು ಪುಸ್ತಕಗಳನ್ನು 230 ಪ್ರಬಂಧಗಳನ್ನು ರಚಿಸಿದ್ದಾರೆ. ಕಾಲಗಣನೆ ಮತ್ತು ಘಟನಾವಳಿಗಳ ಬಗ್ಗೆ ಅವರಿಗಿದ್ದ ಜ್ಞಾಪಕಶಕ್ತಿ ಅಪಾರ. ಇವರು ತಮ್ಮ ಸಂಶೋಧನೆಗಳನ್ನು ಪೂನಾದ ಬಂಡಾರ್‌ಕರ್ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿ ನಡೆಸಿದರು.

ಬೊಂಬಾಯಿಯ "ರಾಯಲ್ ಏಶಿಯಾಟಿಕ್ ಸೊಸೈಟಿ ಡಾ|| ಫ್ಲೀಟರ ನಂತರ ಅವನತಿ ಹೊಂದಿತು. ಹೆರಾಸರು ಮೇಲಿನ ಸಂಸ್ಥೆಯ ಪುನಃ ಏಳಿಗೆಗೆ ಶ್ರಮಿಸಿದರು. ಅದರ ಫಲವಾಗಿ "ಇಂಡಿಯನ್ ಇನ್ಸ್ಟಿಟೂಟ್ ಆಫ್ ಹಿಸ್ಟರಿ ಅಂಡ್ ಕಲ್ಚರ್–ಸಂಸ್ಥೆ 1926ರಲ್ಲಿ ಜನ್ಮತಾಳಿತು.

ಈ ಸಂಸ್ಥೆ ಸಂಗ್ರಹಹಿಸುವ ಪ್ರಾಚ್ಯವಸ್ತುಗಳಲ್ಲಿ .... ಮೆಸೆಪೊಟಿಮಿಯಾದ ಮುದ್ರೆಗಳು ಗಾಂಧಾರ ಶೈಲಿಯಲ್ಲಿರುವ "ಅಮರಪಾಲಿ ಬುದ್ಧನಿಗೆ ಮಾವಿನ ತೋಪನ್ನು ಅರ್ಪಿಸುತ್ತಿರುವ ದೃಶ್ಯ," ಗುಜರಾತ್, ರಾಜಾಸ್ಥಾನಗಳಲ್ಲಿನ ಶಿಲಾ ವಿಗ್ರಹಗಳು, ಕ್ರೈಸ್ತದೃಶ್ಯಗಳು–1662 ರಲ್ಲಿ ಆಗ್ರಾದಲ್ಲಿ ನಿಧನರಾದ ಜೂಯಿಸ್ಟ್ ಪಾದ್ರಿಯ ಸಮಾಧಿಯ ಕಲ್ಲು - ಹೆನ್ರಿ ಬೀಚರರ ಅಭಿಪ್ರಾಯಗಳು ಎಂಬ ಪುಸ್ತಕ ಪ್ರಮುಖವಾದವು.

ಹೆನ್ರಿ ಬೀಚರು ಸ್ವಲ್ಪಕಾಲ ಸುಲ್ತಾನನ ಸೆರೆಯುಲ್ಲಿದ್ದರು. ಬೀಚರ ಪುಸ್ತಕವನ್ನು ಹೆರಾಸರು ರಸ್ತೆ ಬದಿಯ ವ್ಯಾಪಾರಿಯಿಂದ ಕೇವಲ ಎಂಟು ಅಣೆಗಳಿಗೆ ಕೊಂಡದ್ದು, (ಆಶ್ಚರ್ಯ) ಸಂಗತಿಯೇ ಸರಿ.

ಇಂಡಿಯನ್ ಇನ್ಸ್ಟಿಟೂಟ್ ಆಫ್ ಹಿಸ್ಟರಿ ಅಂಡ್ ಕಲ್ಚರ್ ಸಂಸ್ಥೆಯಲ್ಲಿ ಸೂಕ್ಷ್ಮದರ್ಶಕ ಘಟಕವಿದ್ದು, ಸಂಸ್ಥೆಗೆ ವಿಶ್ವವಿದ್ಯಾಲಯು ಸಹಾಯಧನ ದೊರೆತಿದೆ.

ಕೇವಲ 80 ಪುಸ್ತಕಗಳಿಂದ ಪ್ರಾರಂಭವಾದ ಈ ಸಂಸ್ಥೆಯ ಗ್ರಂಥಾಲಯದಲ್ಲಿ ಈಗ ಕಲೆ, ಪ್ರಾಚ್ಯಶಾಸ್ತ್ರ, ಶಾಸನಗಳು ಮತ್ತು ಇತಿಹಾಸಕ್ಕೆ ಸಂಬಂಧಪಟ್ಟ ಸುಮಾರು 26,000 - ಗ್ರಂಥಗಳಿವೆ.

ಈ ಸಂಸ್ಥೆಯ ಬೆಳ್ಳಿಹಬ್ಬ ಡಾ|| ರಾಧಾಕೃಷ್ಣನ್‌ರವರ ಆಧ್ಯಕ್ಷತೆಯಲ್ಲಿ 1951ರಲ್ಲಿ ನಡೆಯಿತು.

ಇತಿಹಾಸಕಾರರೂ "ಬಾಂಬೆ ಸ್ಕೂಲ್ ಆಪ್ ಹಿಸ್ಟರಿ ಅಂಡ್ ಆರ್ಕಾಲಜಿ" ಸಂಸ್ಥೆಯ ಸ್ಥಾಪಕರು ಆಗಿದ್ದ ಪಿತಾಮಹ ಹೆರಾಸರು 1956ರಲ್ಲಿ ವಿಧಿವಶರಾದರು.

1960ರಲ್ಲಿ ಹೆರಾಸ್ ಇನ್ಸ್ಟಿಟ್ಯೂಟನ್ನು ಸ್ಥಾಪಿಸಲಾಯಿತು. ಈ ಸಂಸ್ಥೆ ಹೆರಾಸ್ ಸ್ಮಾರಕ ವಾರ್ಷಿಕ ಉಪನ್ಯಾಸಗಳನ್ನು ಏರ್ಪಡಿಸುತ್ತದೆ. ಈ ಸಂಸ್ಥೆ ದ್ವೈವಾರ್ಷಿಕ ಪತ್ರಿಕೆಯನ್ನು ಪ್ರಕಟಿಸುತ್ತದೆ. ಈ ಸಂಸ್ಥೆಯ ಬೆಳ್ಳಿಹಬ್ಬವನ್ನು 1976ರಲ್ಲಿ ಆಚರಿಸಲಾಯಿತು. ಇದು ಹೆರಾಸರ 20ನೇ ಪುಣ್ಯತಿಥಿಯ ಸಂದರ್ಭವಾಗಿದ್ದುದು ಒಂದು ವಿಶೇಷ ಸಂಗತಿಯಾಗಿದೆ.

[ಆಧಾರ :– ಇಲ್‌ಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ 1–1–1978]

ಒಂದು ನೆನಪು:

## ಪ್ರಕಾಂಡ ಪಂಡಿತ ಪ್ರೊ|| ಕೆ. ವೆಂಕಟರಾಮಪ್ಪ.

—ಕವಿತಾಕೃಷ್ಣ

ಮೊನ್ನೆ ತಾನೆ ನಮ್ಮಿಂದ ಅಗಲಿ ಅಸ್ತಂಗತರಾದ ಪ್ರೊ|| ಕೆ ವೆಂಕಟರಾಮಪ್ಪನವರು ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳನ್ನು ಬಲ್ಲ ಪ್ರಕಾಂಡ ಪಂಡಿತರಾಗಿದ್ದರು. ಶ್ರೇಷ್ಠ ಶಿಕ್ಷಕರಾಗಿದ್ದುದು ಮಾತ್ರವಲ್ಲದೆ ಶ್ರೇಷ್ಠ ಭಾಷಣಕಾರರೂ, ಬರಹಗಾರರೂ ಆಗಿದ್ದರು. ಕರ್ನಾಟಕಾಂಧ್ರ ಸಾಹಿತ್ಯ ಸಮೀಕ್ಷೆಯನ್ನು ಒಪ್ಪವಾಗಿ ಮಾಡಿದ ವಿಚಾರ ಶೀಲರಾಗಿದ್ದರು. ಪ್ರಬಂಧ ರಚನೆಯಲ್ಲೂ ಸಿದ್ಧಹಸ್ತರಾದಿದ್ದರು ದಿವಂಗತರು ಬರೆದುದೇ ಕಮ್ಮಿ ಎಂಬ ಅಪವಾದವಿದೆ. ಸಂಖ್ಯೆ ದೃಷ್ಟಿಯಿಂದ ಈ ಮಾತು ನಿಜವೆನಿಸಿದರೂ ಪ್ರೌಢಿಮೆಕತೆಯಿಂದ ಈ ಮಾತು ಒಪ್ಪುವಂತದಲ್ಲ. ಇಂದಿನ ಬಹುಪಾಲು ಲೇಖಕರು ಕೃತಿಯಿಂದ ಕೃತಿಗೆ ಇಳಿಮುಖವಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಆದರೆ ಕೋಟೆಬಂಡೆ ವೆಂಕಟರಾಮಪ್ಪನವರು ಕೃತಿಯಿಂದ ಕೃತಿಗೆ ಏರಿರುವುದನ್ನು ಕಾಣುತ್ತೇವೆ. ಮೈಸೂರು ವಿಶ್ವ ವಿದ್ಯಾನಿಲಯದ ಕನ್ನಡ ಎಂ ಎ. ಮೊದಲ ತಂಡದ ವಿದ್ಯಾರ್ಥಿಗಳಾಗಿದ್ದ ಇವರು ಸಾಹಿತ್ಯ ಸೇವೆಯನ್ನು ಸದ್ದುಗದ್ದಲವಿಲ್ಲದೆ ಸಲ್ಲಿಸಿದ ರೀತಿಯನ್ನು ಸಾಹಿತ್ಯಾಸಕ್ತರು ಗುರುತಿಸದೇ ಇಲ್ಲ. ಎಲೆಮರೆಯ ಹೂವಾಗಿ ಅವರು ಬೀರಿದ ಕಂಪು ಬೆಲೆ ಕಟ್ಟಲಾಗದಂತದ್ದು. ಅವರು ಅಮೂಲ್ಯವಾದ 20ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿ ಹೋಗಿದ್ದಾರೆ.

ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಕೋಟೆಬಂಡೆಯ ವೆಂಕಟರಾಮಪ್ಪನವರು ೧೯೦೬ನೆಯ ಇಸವಿ ಮೇ ೨೮ರಂದು ಜನಿಸಿದರು. ಸುಬ್ಬಾಶಾಸ್ತ್ರಿ ಹಾಗೂ ಸಾವಿತ್ರಮ್ಮನವರ ಸುಪುತ್ರರಾಗಿ ಜನಿಸಿದ ಇವರ ಪ್ರಾಥಮಿಕ ವಿದ್ಯಾಭ್ಯಾಸ ಪಾವಗಡದಲ್ಲಿ ಸಾಗಿತು. ಪ್ರೌಢ ವ್ಯಾಸಂಗ ಮೈಸೂರಿನಲ್ಲಿ ಪಡೆದು ೧೯೩೨ರಲ್ಲಿ ಎಂ. ಎ. ಪದವೀಧರರಾದರು ಕನ್ನಡ ಎಂ. ಎ. ಮೊದಲ ತಂಡದ ವಿದ್ಯಾರ್ಥಿಯಾಗಿದ್ದಾಗ ರಾಷ್ಟ್ರಕವಿ ಕುವೆಂಪು ಡಿ. ಎಲ್. ನರಸಿಂಹಾಚಾರ್, ಎನ್. ಅನಂತರಂಗಾಚಾರ್, ಡಿ. ಕೆ. ಭೀಮಸೇನಾಚಾರ್, ಅವರುಗಳು ಸಹ ಓದುಗರಾಗಿದ್ದರು ಕನ್ನಡದ ಅಶ್ವಿನಿ ದೇವತೆಗಳೆನಿಸಿದ ಎ. ಆರ್. ಕೃಷ್ಣಶಾಸ್ತ್ರಿಗಳ ಪ್ರೀತಿ ಪಾತ್ರರಾಗಿದ್ದ ವೆಂಕಟರಾಮಪ್ಪನವರು ಶಾಸ್ತ್ರಿಗಳ ಅಚ್ಚು ಮೆಚ್ಚಿನ ಶಿಷ್ಯರೂ ಆಗಿದ್ದರು. ದಿವಂಗತರ ಪ್ರತಿಭೆಯನ್ನು ಗುರುವೃಂದ ಗಮನಿಸಿ ನೀಡಿದ ಪ್ರೋತ್ಸಾಹವನ್ನೂ, ಆಡಿದ ನುಡಿಗಳನ್ನೂ ಸದಾ ಸ್ಮರಿಸುತ್ತಿದ್ದರು. ತಮ್ಮಲ್ಲಿ ಕನ್ನಡಾಭಿಮಾನದ ಚಿಲುಮೆ ಉಕ್ಕಿದ್ದೇ ಗುರುಗಳ ಕಾರುಣ್ಯದಿಂದ. ಸಾಧನೆ ಸಿದ್ಧಿಗಳಾದುದು ಅವರ ಕರುಣಾ ಪ್ರಸಾದದಿಂದಲೇ ಎಂಬುದು ಅವರ ಅನಿಸಿಕೆಯಾಗಿತ್ತು. ಕನ್ನಡದ ಕಣ್ವ ಬಿ. ಎಂ. ಶ್ರೀಕಂಠಯ್ಯ, ಆಚಾರ್ಯ ಪುರುಷ ತಳುಕಿನ ವೆಂಕಣ್ಣಯ್ಯ, ಜೆ.ಸಿ.ರಾಲೋ ಎಸ್.ಎಸ್.ಸುಬ್ಬರಾಯ, ಎ.ಆರ್.ಕೃ ಮುಂತಾದ ಅಧ್ವರ್ಯುಗಳು ಇವರ ಗುರುಗಳಾಗಿದ್ದರು.

ತ್ರಿಭಾಷಾ ಪಂಡಿತರಾದ ಕೆ. ವೆಂ. ಅವರು ೧೯೩೦ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ನೌಕರಿಗೆ ಸೇರಿದರು. ತುಮಕೂರು, ಬೆಂಗಳೂರುಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿ ೧೯೬೧ ರಲ್ಲಿ ನಿವೃತ್ತರಾದರು. ಉಪನ್ಯಾಸಕರಾಗಿ, ಪ್ರವಾಚಕರಾಗಿ ಪ್ರೊಫೆಸರ್ ಆಗಿ ದುಡಿದ ಹಿರಿಯ ಜೀವ ವೃತ್ತಿ ಪ್ರವೃತ್ತಿಗಳನ್ನು ನಿಲುಗಡೆಗೊಳಿಸದೆ ಶಾರದಾವಿಲಾಸ ಕಾಲೇಜಿನಲ್ಲಿ ಅಧ್ಯಾಪಕರಾಗಿ ದುಡಿದರು. ಮೈಸೂರಿನ ನಿವೃತ್ತ ಜೀವನ ಸಾಗಿಸುತ್ತಾ ಹಲವು ಮೌಲಿಕ ಕೃತಿಗಳನ್ನು ಬರೆದರು. ಆ ಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಅನುದಾನ ಸಮಿತಿಯು ಸಂಶೋಧನಾ ವೇತನ ನೀಡಿತು.

ದಿವಂಗತರಲ್ಲಿ ಒಂದು ರೀತಿ ಸ್ಥಿತ ಪ್ರಜ್ಞಶಕ್ತಿ ಇತ್ತು ಎಂದರೆ ಅವರನ್ನು ಸಮೀಪದಿಂದ ಬಲ್ಲವರಿಗೆ ಈ ಮಾತು ಅತಿಶಯೋಕ್ತಿ ಎನಿಸದು. ಅವರು ಕಳೆದು ಹೋದ ವಿಷಯಗಳ ಬಗ್ಗೆ ಕೊರಗಿ ಮರುಗಿದವರಲ್ಲ. ಭವಿಷ್ಯದ ಬಗ್ಗೆ ಆಶಾಗೋಪುರವನ್ನು ಕಟ್ಟಿದವರಲ್ಲ. ಕಾರ್ಯವಾಗಿ ಕಾಲುಕಟ್ಟುವ ಕೀಳು ಗುಣಕ್ಕೆ ಎಂದೂ ತಲೆಬಾಗಿದವರಲ್ಲ. ಕೀರ್ತಿ ಶನಿಯ ಬೆನ್ನು ಹತ್ತಿದ ಜಾಯಮಾನದವರಲ್ಲ. ದೇವರು ತೋರಿದ ಸನ್ಮಾರ್ಗದಲ್ಲಿ ಮುನ್ನಡೆವ ಸಂಕಲ್ಪ ಅವರದಾಗಿತ್ತು. ಒಪ್ಪನುಡಿ ಅದಕ್ಕೆ ತಕ್ಕ ನಡೆ ಅವರ ಸಾಧನಾ ಮಾರ್ಗವಾಗಿತ್ತು.

ವೆಂಕಟರಾಮಪ್ಪನವರ ಕೃತಿಗಳನ್ನು ಪ್ರಚಾರ ಪುಸ್ತಕ ಮಾಲೆ, ಮೈಸೂರು ವಿ.ವಿ. ಶಾರದಾ ಮಂದಿರ, ಗೀತಾ ಬುಕ್ ಹೌಸ್, ಸಾಹಿತ್ಯ ಅಕಾಡೆಮಿ, ಡಿ.ವಿ ಕೆ ಮೂರ್ತಿ, ವಯಸ್ಕರ ಶಿಕ್ಷಣ ಸಮಿತಿ, ಕನ್ನಡಸಾಹಿತ್ಯಪರಿಷತ್ತು ಮೊದಲಾದ ಸಂಸ್ಥೆಗಳು ಇವರ ಪುಸ್ತಕಗಳನ್ನು ಪ್ರಕಟಗೊಳಿಸಿವೆ ೭೦ಕ್ಕೂ ಹೆಚ್ಚಿನ ಕೃತಿಗಳು ಪ್ರಕಟಗೊಂಡು ಅಮೂಲ್ಯವೆನಿಸಿವೆ. ಕನ್ನಡ ಸಾಹಿತ್ಯ-ತೆಲಗು ಚಾಟುಪದ್ಯಗಳು, ಶ್ರೀನಾಥ-ವೇಮನ ಪಂಪ-ನನ್ನಯ ಒಂದು ಸಮೀಕ್ಷೆ ಚಾಟುವಿಠಲನಾಥನ ಭಾಗವತ ಸಂಪುಟಗಳು, ರಾಘವಾಂಕ, ಕನಕದಾಸರು, ದುರ್ಗಸಿಂಹ, ಕಾವ್ಯ ಮಂಥನ, ವಿಚಾರಲಹರಿ ಬಹುಮುಖ್ಯ ಎನಿಸಿವೆ.

ತಿಪಟೂರಿನಲ್ಲಿ 1981ರಲ್ಲಿ ಜರುಗಿದ ತುಮಕೂರು ಜಿಲ್ಲೆಯ ದ್ವಿತೀಯ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು. ಮೊನ್ನೆ ಜರುಗಿದ ಮೈಸೂರಿನ ಅ.ಕ.ಸಾ. ಸಮ್ಮೇಳನದಲ್ಲಿ ಸನ್ಮಾನಿಸಲಾಗಿತ್ತು. ನಾಡಿನಾದ್ಯಂತ ಹಲವೆಡೆ ಇವರ ಉಪನ್ಯಾಸ ಕಾರ್ಯಕ್ರಮಗಳು ಜೊತೆಗೂಡಿ ನಡೆದಿದ್ದವು. ನನಗೆ ದೇವರು ಕೊಟ್ಟ ಶಕ್ತಿ, ನಾನು ಬೆಳೆದ ಪರಿಸರ, ನನಗಿದ್ದ ಬುದ್ಧಿಯ ಪರಿಮಿತಿಗಳಲ್ಲಿ ಎಷ್ಟು ಸಾಧ್ಯವೋ ಅಷ್ಟು ಸಾಹಿತ್ಯ ಸೇವೆಮಾಡಿದ್ದೇನೆ. ಆ ಬಗ್ಗೆ ನನಗೆ ತೃಪ್ತಿ ಸಿಕ್ಕಿದೆ ಎಂದು ನುಡಿದಿದ್ದ ಹಾಗೂ ಮನಮೆಚ್ಚುವಂತೆ ಬಾಳಿದ್ದ ಕೆ. ವೆಂಕಟರಾಮಪ್ಪನವರಂತಹ ಪ್ರಕಾಂಡ ಪಂಡಿತರನ್ನು ಕಳೆದುಕೊಂಡು ನಷ್ಟ ಪಟ್ಟಂತಾಗಿದೆ. ಅಗಲಿದ ಆಚಾರ್ಯ ಪುರುಷರಿಗೆ ಶ್ರದ್ಧಾಂಜಲಿ.

# ವಿಜ್ಞಾನ ಮತ್ತು ಆಧ್ಯಾತ್ಮ

ಶ್ರೀ ಎಚ್. ಎಸ್. ನರಸಿಂಹ ಜೀಯರ್, ಶ್ರೀ ಬಸವೇಶ್ವರ ಇಂಗ್ಲಿಷ್ ಶಾಲೆ, ತುಮಕೂರು-2

ಮಹಾಭಾರತ ಯುದ್ಧ ನಡೆಯುತ್ತಿರುವಾಗ ಆಚಾರ್ಯ ದ್ರೋಣರನ್ನು ಪಾಂಡುವರು ಕೊಂದ ಬಗ್ಗೆ ಬರುವ ಸನ್ನಿವೇಶವನ್ನು ನಾವೆಲ್ಲಾ ಅರಿತಿದ್ದೇವೆ. ಆಚಾರ್ಯರನ್ನು ನೇರ ಯುದ್ಧದಲ್ಲಿ ಸೋಲಿಸಲು ಸಾಧ್ಯವಿಲ್ಲವೆಂಬುದನ್ನು ಅರಿತ ಶ್ರೀ ಕೃಷ್ಣನು ತಂತ್ರ ಹೂಡಿ "ಅಶ್ವತ್ಥಾಮೋ ಹತಃ ಕುಂಜರಃ" ಎಂಬ ವಾಣಿಯನ್ನು ಧರ್ಮರಾಯನಿಂದ ಹೇಳಿಸಿದ. "ಕುಂಜರಃ" ಶಬ್ದವು ಆಚಾರ್ಯರ ಕಿವಿಗೆ ಬೀಳದಂತೆಮಾಡಲು ತನ್ನ ಪಾಂಚಜನ್ಯವನ್ನೂದಿದ. "ಅಶ್ವತ್ಥಾಮೋ ಹತಃ" ಎಂಬ ವಾಕ್ಯ ಧರ್ಮರಾಯನಿಂದ ಹೇಳಲ್ಪಟ್ಟಿರುವುದರಿಂದ ಅದನ್ನು ಸತ್ಯವೆಂದೇ ಭಾವಿಸಿ ತಮ್ಮ ದೇಹವನ್ನು ರಣರಂಗದಲ್ಲಿಯೇ ಬಿಟ್ಟು ಮಗನ ಯೋಗಕ್ಷೇಮ ನೋಡಲು ಸೂಕ್ಷ್ಮ ರೂಪದಲ್ಲಿ ಹೋದರು. ದೇಹ ರಣರಂಗದಲ್ಲಿದ್ದರೂ ದೇಹಿ ಮಾತ್ರ ಮಗನನ್ನು ಅರಸುತ್ತಿತ್ತು. ಆಗ ಅರ್ಜುನನಿಂದ ಆಚಾರ್ಯರ ದೇಹಿ ಇಲ್ಲದ ದೇಹವನ್ನು ಶ್ರೀ ಕೃಷ್ಣನು ಕತ್ತರಿಸಿದ. ಈ ಸನ್ನಿವೇಶವನ್ನು ಪರಿಶೀಲಿಸಿದಾಗ ಭೌತ ದೇಹ ಬೇರೆ ಹಾಗೂ ಅದರಲ್ಲಿ ವಾಸಿಸುವ ದೇಹಿ ಬೇರೆ ಎಂಬ ಭಾವನೆ ಎಲ್ಲರಲ್ಲಿಯೂ ಮೂಡುವುದು ಸಹಜವಾಗಿದೆ. ಇದು ಪುರಾಣದಲ್ಲಿ ಬರುವ ವಿಚಾರ. ಇಂತಹ ಅನೇಕ ಅತೀಂದ್ರಿಯ ಘಟನೆಗಳನ್ನು ವೇದಗಳಲ್ಲಿ ಉಪನಿಷತ್ತುಗಳಲ್ಲಿ ಹಾಗೂ ಪುರಾಣಗಳಲ್ಲಿ ನೋಡುತ್ತೇವೆ. ಈ ಅಂಶವನ್ನು ವೈಜ್ಞಾನಿಕ ಯುಗದಲ್ಲಿ ನಂಬಲು ಸಾಧ್ಯವೇ? ನಂಬಲು ಸಾಧ್ಯವಿಲ್ಲನೆಂದೇ ಅನೇಕರ ಭಾವನೆ.

ಈ ಬಗ್ಗೆ ವಿಜ್ಞಾನ ಏನು ಹೇಳುತ್ತದೆ? ಇಂತಹ ವಿಚಾರಗಳನ್ನು ಪ್ರಯೋಗಗಳಿಗೆ ಅಳವಡಿಸಲಾಗಿದೆಯೇ? ಮನೋವಿಜ್ಞಾನಿಗಳು ಈ ಘಟನೆಗಳ ವಿಚಾರದಲ್ಲಿ ಏನು ಅಭಿಪ್ರಾಯಪಡುತ್ತಾರೆ? ಎಂಬ ಬಗ್ಗೆ ಈ ವಿಚಾರ ಮಾಡೋಣ. ನ್ಯಾಸಾದಲ್ಲಿರುವ ಟೋಪೇಕಾದ ಮೆಟಿಕಿನ್ಸ್ ಆಸ್ಪತ್ರೆಯ ಸೈಕಿಯಾಟ್ರಿ ವಿಭಾಗದ ಮುಖ್ಯಸ್ಥರಾದ ಸ್ಟೂವರ್ಟ್‌ಟ್ವಿಮ್ಲೋರವರು ಅನೇಕ ಪ್ರಯೋಗಗಳನ್ನು ಈವಿಚಾರದಲ್ಲಿ ನಡೆಯಿಸಿ ಔಷಧ ಸೇವನೆ, ಸುಪ್ತ ಸೂಚನೆ ಹಾಗೂವಿದ್ಯುತ್ ತರಂಗಗಳ ಮೂಲಕ ಮಿದುಳನ್ನು ಉತ್ತೇಜನಗೊಳಿಸಿ ದೇಹಾತೀತ ಅನುಭವವನ್ನು ಸ್ವತಃ ತಾವೇ ಪಡೆಯಬಹುದೆಂಬುದನ್ನು ಧೃಡಪಡಿಸಿದ್ದಾರೆ. ಕೆಂಟಕಿಯ ಅಸ್ವನ್ ಪ್ರಯೋಗಶಾಲೆಯಲ್ಲಿನ ಸುಸಜ್ಜಿತ ಪಂಜರದಲ್ಲಿ ಶ್ರೀ ಟ್ವಿಮ್ಲೋರವರು ಕುಳಿತುಕೊಂಡು ಅವರ ಮಿದುಳನ್ನು ಶಬ್ದಾತೀತ ತರಂಗಗಳ ಮೂಲಕ ಪ್ರಚೋದನೆಗೆ ಒಳಪಡಿಸಿದರು. ಆಗ ಅವರಿಗಾದ ಅನುಭವವನ್ನು ಈಗ ಅವರ ಮಾತಿನಲ್ಲೇ ಕೇಳೋಣ.

"ಮಿದುಳನ್ನು ಪ್ರಚೋದಿಸಿದ ನಂತರ ನನ್ನ ಮನಸ್ಸು ದೇಹದಿಂದ ಬೇರೆಯಾಗುತ್ತಿರುವುದನ್ನು ನಾನು ಗಮನಿಸುತ್ತಲೇ ಇದ್ದೆ. ಇದೇ ಸ್ಥಿತಿಯಲ್ಲಿ ಮನಸ್ಸು ವೇಗವಾಗಿ ಒಂದು ಸುರಂಗದ ಮೂಲಕ ಕತ್ತಲಿನಲ್ಲಿ ಪ್ರಯಾಣ ಮಾಡಿ ಸುಮಾರು ನಲವತ್ತು ಮೈಲಿಗಳಷ್ಟು ದೂರವಿದ್ದ ನನ್ನ ಮನೆಯನ್ನು ತಲುಪಿತು. ಇದರ ಅರಿವು ನನಗೆ ಚೆನ್ನಾಗಿಯೇ ಇತ್ತು. ಆ ವೇಳೆಯಲ್ಲಿ ನನ್ನ ಹೆಂಡತಿ ಅಡಿಗೆ ಮನೆಗೆ ನೀರನ್ನು ಕುಡಿಯಲು ಹೋಗುತ್ತಿದ್ದುದನ್ನು ಗಮನಿಸಿದೆ. ಆಗ ವೇಳೆ ರಾತ್ರಿ 9-30 ಗಂಟೆ. ಆಕೆ ನೀರನ್ನು ಕುಡಿದು ಪುನಃ ಮಲಗುವ ಕೋಣೆಗೆ ಹೋಗುತ್ತಿದ್ದುದನ್ನೂ ನೋಡಿದೆ. ಅವಳ ಪಕ್ಕದಲ್ಲಿ ಕೆಲವು ಕಾಲ ನಿಂತು ನಂತರ ನಿಲುವು ಗನ್ನಡಿಯ ಹತ್ತಿರ ಹೋಗಿ ನನ್ನ ಪ್ರತಿಬಿಂಬಕಾಣಲು ಪ್ರಯತ್ನಿಸಿದೆ. ಆದರೆ ನನ್ನ ಪ್ರತಿಬಿಂಬ ಕನ್ನಡಿಯಲ್ಲಿ ಕಾಣಲಿಲ್ಲ. ನಂತರ ಹಿಂತಿರುಗಿ ಬಂದು ನನ್ನ ಶರೀರವನ್ನು ಸೇರಿದಂತೆ ಅನುಭವವಾಯಿತು.

ಈ ಅನುಭವವನ್ನು ನಾನು ಊರಿಗೆ ಬಂದ ನಂತರ ಯಾರಿಗೂ ಹೇಳಲಿಲ್ಲ, ನನ್ನ ಹೆಂಡತಿಗೂ ಹೇಳಲಿಲ್ಲ. ಇಂತಹ ಅನುಭವಗಳ ಬಗ್ಗೆ ಅವಳಿಗೆ ನಂಬಿಕೆ ಸಹ ಇರಲಿಲ್ಲ, ನಾನಾಗಿ ಅವಳನ್ನು ಕೇಳದೆ ಇದ್ದರೂ ಅವಳೇ ಈ ರೀತಿ ಹೇಳಿದಳು. "ನೀವು ಕೆಂಟಕಿಯಲ್ಲಿದಾಗ ಒಂದು ದಿನ ರಾತ್ರಿ 9–30 ಗಂಟೆಯಲ್ಲಿ ಅಡಿಗೆ ಮನೆಗೆ ನೀರನ್ನು ಕುಡಿಯಲು ಹೋಗಿ ಹಿಂತಿರುಗಿ ಬರುತ್ತಿದ್ದಾಗ ಯಾವುದೋ ನೆರಳಿನಂಥದೊಂದು ಕ್ಷಣಕಾಲ ನನ್ನ ಸಮೀಪದಲ್ಲಿದ್ದಂತೆ ನನಗೆ ಅನುಭವವಾಯಿತು. ನಂತರ ಅದು ನಿಲವು ಗನ್ನಡಿ ಹತ್ತಿರ ನಿಂತಂತಾಗಿ ಮಾಯವಾಯಿತು'' ಇದರಿಂದ ಸಂತೋಷಗೊಂಡ ಟ್ವಿಮ್ಲೋ ತನ್ನ ಪ್ರಯೋಗ ಯಶಸ್ವಿಯಾದುದನ್ನು ಗಮನಿಸಿ ದೇಹಾತೀತ ಅಸ್ತಿತ್ವದಲ್ಲಿದೆ ಎಂಬುದ ತರ್ಕಬದ್ಧವಾಗಿದೆ ಎಂದು ಖಚಿತ ಪಡಿಸಿದ.

ಅತೀಂದ್ರಿಯ ಘಟನೆಗಳು ಸಾಮಾನ್ಯವಾಗಿ ಬುದ್ಧಿ ಭ್ರಮಣೆ ಯಾದ ವ್ಯಕ್ತಿಗಳಿಗೆ ಮಾತ್ರ ಸೀಮಿತವಾದುದು ಎಂಬ ಭಾವನೆ ಕೆಲವು ಮನಶಾಸ್ತ್ರಜ್ಞರಲ್ಲಿತ್ತು. ಈ ದಿಶೆಯಲ್ಲಿ ಮೇಲ್ಕಂಡತಹ ಅನೇಕ ಪ್ರಯೋಗಗಳನ್ನು ನಡೆಸಿದ ನಂತರ ಹಾಗೂ ಅಂತಹ ಅನೇಕ ಘಟನೆಗಳನ್ನು ವೈಜ್ಞಾನಿಕವಾಗಿ ಪರಿಶೀಲಿಸಿದ ನಂತರ ವಿಜ್ಞಾನಿಗಳು ತಮ್ಮ ಮನೋಭಾವವನ್ನು ಬದಲಾಯಿಸಿದ್ದಾರೆ. ಅಮೆರಿಕಾದ "ಟ್ರಾನ್ಸ್ ಪರ್ಸನಲ್ ಸೈಕಾಲಜಿ" ವಿಭಾಗದ ಅನ್ವೇಷಣಾ ತಜ್ಞರು ಅನೇಕ ಅತೀಂದ್ರಿಯ ಘಟನೆಗಳನ್ನು ಪರಿಶೀಲಿಸಿ ತಮ್ಮ ಪತ್ರಿಕೆಯಲ್ಲಿ ಪ್ರಕಟಮಾಡಿದ್ದಾರೆ. ಅವರ ಅಭಿಪ್ರಾಯದಂತೆ ಮನುಷ್ಯನ ಮನಸ್ಸು ಮಿದುಳಿಗಿಂತ ಭಿನ್ನವಾದುದು. ಮನಸ್ಸಿನ ನಿಯಂತ್ರಣದಿಂದ ಮಾನವನ ನರಮಂಡಲ ಹಾಗೂ ದೈಹಿಕ ಚಟುವಟಿಕೆಗಳನ್ನೂ ಸಹ ನಿಯಂತ್ರಿಸಬಹುದು. ಈ ತೀರ್ಮಾನಗಳು, ನಮ್ಮ ಹಿಂದಿನ ವೇದ, ಉಪನಿಷತ್ತು ಹಾಗೂ ಪುರಾಣಗಳಲ್ಲಿ ಬರುವ ಅನೇಕ ಅತೀಂದ್ರಿಯ ಘಟನೆಗಳ ಬಗ್ಗೆ ಬೆಳಕು ಬೀರುವುದಲ್ಲದೆ ಅವುಗಳು ನಡೆದಿರಲು ಸಾಧ್ಯ ಎಂಬ ಅರಿವನ್ನೂ ನಮ್ಮಲ್ಲಿ ಮೂಡಿಸುತ್ತವೆ. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಪ್ರಯೋಗಗಳು ರಷ್ಯಾ, ಅಮೆರಿಕಾಗಳಲ್ಲದೆ ಇನ್ನೂ ಇತರ ದೇಶಗಳಲ್ಲಿಯೂ ನಡೆಯುತ್ತಿವೆ.

# ಅ ಶಾ ಶ್ವ ತಾ ನಿ ಜ ಗ ತ್

ರಾಜೇಂದ್ರಶಿಶು, 242, ಉತ್ತರಾಧಿಮಠದ ರಸ್ತೆ, ಮೈಸೂರು-4.

ಸಿರಿಯು ಸಂಪದವು ಸ್ಥಿರವೆಂದ ಜಗಜನರ
ಪರಿಯ ಕಂಡು ಜಗ ನಗುತ್ತ ಕೇಳಿತ್ತು,
ಸ್ಥಿರವಾವುದಿಲ್ಲಿ ?

ಅಶಾಶ್ವತವಾದ ಈ ಜಗತ್ತಿನಲ್ಲಿ ಯಾವುದು ಶಾಶ್ವತ ? ಯಾವುದು ಅಶಾಶ್ವತ ? ಮಾನವ ಅಶಾಶ್ವತವಾದುದನ್ನ ನಂಬಿ ತನ್ನ ಸಂತಸದ ದಿನಗಳನ್ನು ದುಃಖಮಯವಾಗಿಸಿದ್ದಾನೆ. ಆತನ ಆಶೆ ಎಂಬ ಸರ್ಪ ಹೆಡೆ ಎತ್ತಿ ಎಷ್ಟು ಜನರನ್ನ ಘಾಸಿಗೊಳಿಸಿಲ್ಲ. ''ಜಾತಸ್ಯಂ ಮರಣಂ ಧೃವಂ'' ಎಂದು ಅರಿತಿದ್ದರೂ ಆತನ ದುರಾಶೆಯ ರೂಪ ಇನ್ನೂ ಆಳವಾಗುತ್ತಲೇ ಇದೆ. ಕಾಲವೆ ಅಶಾಶ್ವತವಾಗಿರುವಾಗ ನಮ್ಮ ಜೀವನವೇನು ? ಕಾಲ ಶಾಶ್ವತವಾಗಿದ್ದರೆ. ಕೃತಯುಗ, ತ್ರೇತಾಯುಗ ದ್ವಾಪರಯುಗ' ಕಲಿಯುಗಗಳ ಚಕ್ರಸುತ್ತುತ್ತಿರಲಿಲ್ಲ, ಆಯುಗಗಳ ಸ್ಥಿತಿ ಹೀಗಾದಾಗ ನಮ್ಮ ಬದುಕೇನು ?

ನಾವು ಆಶೆಯತಂದವರೆ ಹೊರತು ಆಯುಷ್ಯ ತಂದವರಲ್ಲ. ಇದನ್ನರಿತ ಶರಣರು ಹೇಳಿದುದು "ಅರ್ಥರೇಖೆ ಇದ್ದಲ್ಲಿ ಫಲವೇನು ? ಆಯುಷ್ಯ ರೇಖೆ ಇಲ್ಲದನ್ನಕ್ಕ" ಜಗದ ಅಶಾಶ್ವತತೆಯನ್ನ ಚೆನ್ನಾಗಿ ಅರಿತಿದ್ದರು ಶರಣರು. ಕಲ್ಯಾಣ ಕ್ರಾಂತಿಯ ಸಮಯದಲ್ಲಿ ಬಸವಣ್ಣನವರು ಮಂತ್ರಿ ಪದವಿಯ ಸಂಕೋಲೆಯನ್ನು ಕಳಚಿಟ್ಟು ಅದರತ್ತ ತಿರುಗಿ ನೋಡದೆ ನಿರ್ಲಿಪ್ತರಾಗಿ ಹೊರಟಿದ್ದು ಈ ಲೋಕದ ಬಂಧನದಿಂದ ಮುಕ್ತರಾದದ್ದು ಇಲ್ಲಿ ನೆನಪಿಗೆ ಬರುತ್ತದೆ. ಅವರಿಗೆ ಗೊತ್ತಿತ್ತು ಸಿರಿಯು ಸಂಪದವು ಸ್ಥಿರವಲ್ಲವೆಂದು. ನಾವು ಅಸ್ಥಿರವಾದುದನ್ನ ಸ್ಥಿರವೆಂದು ನಂಬಿ ಅದರಲ್ಲಿ ತೊಳಲಾಡುತಿದ್ದೇವೆ ಉನ್ನತ ಅಧಿಕಾರಿ ತನ್ನ ಅಧಿಕಾರ ಶಾಶ್ವತವಂದರೆ ಎಷ್ಟು ಮೈಮರೆತಿರುತ್ತಾನೆ. ಅಹಂಕಾರದಿಂದ ವರ್ತಿಸುತ್ತಾನೆ. ತಾನು ತನ್ನ ಅಧಿಕಾರದಿಂದ ನಿವೃತ್ತನಾಗುವೆ ನೆಂಬುದನ್ನು ಮರೆತಿರುತ್ತಾನೆ. ಅಧಿಕಾರ ಮೋಹ ಮೈಮರೆತರುತ್ತದೆ. ಆದರೆ ಮೇಲೇರಿದ ವಿಮಾನ ಕೆಳಗಿಳಿಯಲೇ ಬೇಕು ಕೆಳಗಿಳಿದ ನಂತರ ತನ್ನ ಸ್ಥಿತಿಯ ಬಗ್ಗೆ ಪಶ್ಚಾತ್ತಾಪ ಪಟ್ಟೆಲ್ಲ ಅಶಾಶ್ವತ ಕಲ್ಪನೆ ಇದ್ದಿದ್ದರೆ ಸಂತೃಪ್ತಿಯ ಬದುಕು ಅವನದಾಗಿರುತಿತ್ತು. ನಾವು ಕೊಟ್ಟೆಕುದುರೆಯ ನೇರಲರಿಯದ, ನಾಳಿನ ಬಗ್ಗೆ ಚಿಂತಿಸುವ, ಕೊಡುವ ಶಿವನ ಮರೆತ ಜನ. ಆದರಿಂದ ಅಶಾಶ್ವತ ವಸ್ತುವಿಗಾಗಿ ತೊಳಲುತ್ತೇವೆ ಬಳಲುತ್ತೇವೆ. ಸಿಗದಾಗ ಕೋಪಗೊಂಡು ಉದ್ರೇಕ ಗೊಳ್ಳುತ್ತೇವೆ ಬದುಕನ್ನು ನಾಶಗೊಳಿಸಿಕೊಳ್ಳುತ್ತೇವೆ.

ನಮ್ಮಂಥವರಿಗೆ ಜೀವನದ ಅಶಾಶ್ವತತೆಯ ನೆನಪು ಬರುವುದು ಒಂದೇ ಸಂದರ್ಭದಲ್ಲಿ, ಸ್ಮಶಾನಕ್ಕೆ ಹೋಗಬೇಕಾದ ಸಂದರ್ಭದಲ್ಲಿ. "ಏನು ಶಾಶ್ವತವಪ್ಪ ಎಲ್ಲಾ ಒಂದಲ್ಲ ಒಂದು ದಿನ ಈ ರೀತಿ ಹೋಗಲೇ ಬೇಕು ಅದಕ್ಯಾಕೆ ಇಷ್ಟೊಂದು ಕಚ್ಚಾಡ ಬೇಕು ಏನನ್ನೂ ಕೊಂಡು ಹೋಗಲ್ಲ ಬರಿಗೈಯಲ್ಲಿ ಹಿಂದಿರುಗುತ್ತೇವೆ. ಸತ್ಮೇಲೆ ನಾನ್ಯಾರೋ, ಗಳಿಸಿದ ಆಸ್ತಿ ಯಾರದೋ ? ಇರೋತನಕ ಬಡಿದಾಡ್ತೇವೆ" ಎಂದು ಮಾತನಾಡಿ ಕೊಂಡರೂ—ಸ್ಮಶಾನ ಬಿಟ್ಟು ಹೊರಬಂದ ನಂತರ ನಾವು ಹಿಂದಿನ ಸ್ಥಿತಿಗೆ ಮರಳುತ್ತೇವೆ. ನಮ್ಮ ಜೀವನ ಪುಸ್ತಕದಲ್ಲಿ ನಾಳೆಗಳೇ ಹೆಚ್ಚು. ಆ ಕಾರಣ ಗಳಿಸಬೇಕೆಂಬ ಆಲೋಚನೆಗೆ ಬಲಿಯಾಗುತ್ತೇವೆ. ಅದಕ್ಕಾಗಿ ಸಂಗ್ರಹಿಸುವ ಆಶೆ ಬಲವಾಗುತ್ತದೆ. ಅದಕ್ಕೆ ಬಲಿಯಾಗುತ್ತೇವೆ "ಒಬ್ಬ ಮುದುಕ ಆತ ಎಲ್ಲಿಗೋ ಪ್ರಯಾಣಿಸುತ್ತಿದ್ದ ಬಹಳ ಬಾಯಾರಿಕೆ ಆಗಿತ್ತು ತುಸು ನೋಡಿದ ನೀರಿನ ಹನಿಯೂ ಸಿಗಲ್ಲಿಲ್ಲ. ಹತ್ತಿರದಲ್ಲಿ ಒಂದು ತೆಂಗಿನ ಮರ ಕಂಡ ಎಳನೀರು ಕಡಿದು ಬಾಯಾರಿಕೆ ನೀಗಿಸಿ ಕೊಳ್ಳುವ ಇಚ್ಛೆಯಿಂದ ಮರ ಹತ್ತಿ ನಾಲ್ಕಾರು ಎಳನೀರು ಕಿತ್ತು ಹಾಕಿದ. ಆನಂತರ ಸ್ವಲ್ಪ ಕೆಳಗಿಳಿದ ಆ ಕ್ಷಣ ಅವನ ದೃಷ್ಟಿ ಒಂದು ಹಾರುವ ಚಿಟ್ಟೆಯತ್ತ ಹೋಯಿತು. ಅದು ಇವನಸುತ್ತ ಸುಳಿಯುತ್ತಿತ್ತು, ತಕ್ಷಣ ಆತನಿಗೆ ಅವನ ಮೊಮ್ಮಗ ಮನೆಯಲ್ಲಿ ಚಿಟ್ಟೆ ಹಿಡಿದು ಕೊಡು ಎಂದು ಕಾಡಿದ್ದು ನೆನಪಾಯಿತು. ಅದನ್ನು ಹಿಡಿಯಲು ಮನ ಮಾಡಿದ. ಹಾರುತ್ತಿರುವ ಚಿಟ್ಟೆ ಇವನ ಕೈ ಸೇರಲ್ಲಿಲ್ಲ. ಆಶೆ ಬಲವತ್ತಾಗಿ ಅದನ್ನು ಹಿಡಿಯಲೇ ಬೇಕೆಂಬ ಛಲದಲ್ಲಿ ಕೆಳಗೆ ಬಿದ್ದ. ಪರಿಣಾಮ ಜೀವನ ಅಂತ್ಯವಾಯಿತು. ಇದು ಒಂದು ಕಥೆಯಷ್ಟೆ. ಆದರೆ ಅದರ ಹಿನ್ನೆಲೆ ನೋಡಿದಾಗ ಮಾನವನು ತನ್ನ ಆಶೆಗಾಗಿ ಪ್ರಾಣ ಕೊಡಲೂ ಹೆದರನು. ಆಶೆಯ ಭೂತ ಯಾರನ್ನೂ ಬಿಡದು. ಇಂಥ ಕಥೆಗಳನ್ನು ನಾವು ಕೇಳಿದರೂ ನಮ್ಮ ಮನಃ ಪರಿವರ್ತನೆಯಾಗದು.

ನಮ್ಮ ಆಶೆ ಎಂದರೆ ಈ ಜಗತ್ತಿನಲ್ಲಿ ನಾನು ಸತ್ತರೂ ನನ್ನ ಹೆಸರು ಅಜ-ರಾಮರವಾಗಿರ ಬೇಕೆಂದು ಆಶಿಸುತ್ತೇವೆ. ಯೂರೋಪಿನಲ್ಲಿ ಒಬ್ಬ ಸಮಾಜಸುಧಾರಕ ಆತ ಸಮಾಜ ಸೇವೆ ಮಾಡಿದ್ದರ ಕಾರಣ ಆತನ ಪ್ರತಿಮೆಯನ್ನು ಊರ ಮಧ್ಯದಲ್ಲಿ ಅನಾವರಣ ಮಾಡಲು ಜನರೆಲ್ಲ ಇಚ್ಛಿಸುತ್ತಾರೆ. ಅನಾವರಣ ಮಾಡುವ ಹಿಂದಿನ ದಿನ ತನ್ನ ಪ್ರತಿಮೆ ನೋಡಬೇಕೆಂಬ ಕಾತರತೆ ಹೆಚ್ಚಾಗಿ ಆತ ರಾತ್ರಿ 12ಗಂಟೆಗೆ ಎದ್ದು ತನ್ನ ಪ್ರತಿಮೆ ಸಿದ್ಧವಾಗಿರುವ ಸ್ಥಳಕ್ಕೆ ಬಂದ. ಸುತ್ತ ನೋಡಿದ ಯಾರೂ ಇರಲ್ಲಿಲ್ಲ. ಮೆಟ್ಟಿಲುಗಳನ್ನು ಹತ್ತಿ ಹೋಗಿ ತನ್ನ ಪ್ರತಿಮೆ ಇರುವ ಸ್ಥಳಕ್ಕೆ ತಲುಪಿದ ಸುತ್ತ ನೋಡಿ ಹರ್ಷಿಸಿದ. ತನ್ನ ಪ್ರತಿಮೆಯನ್ನು ಮುಟ್ಟಿ ಮುಟ್ಟಿ ನೋಡಿದ ಆ ಕ್ಷಣ ಯಾರೋ ನಕ್ಕಂತಾಯಿತು. ಅಲ್ಲಿ ಕೆಳಗಿನ ಹಂತದಲ್ಲಿ ಕುಳಿತು ಸು

ನೋಡಿದ ಯಾರು ಇಲ್ಲ, ಮತ್ತೆ ತನ್ನ ಪ್ರತಿಮೆಯತ್ತ ತಿರುಗಿದಾಗ ಮತ್ತೆ ನಕ್ಕ ಧ್ವನಿ ಕೇಳಿತು. ನಗುವರಾರೆಂದು ನೋಡಿದಾಗ ಆವನ ಕಾಲ ಕೆಳಗಿನ ಕಲ್ಲು. ಏಕೆ ನಗುತ್ತಿ ? ಕೇಳಿದ ನಿನ್ನ ಸ್ಥಿತಿ ಕಂಡು ನಗು ಬರುತ್ತಿದೆ, ಹಿಂದೆ ನಾನೂ ಕೂಡ ನಿನ್ನ ಪ್ರತಿಮೆ ಇರುವ ಜಾಗದಲ್ಲಿದ್ದೆ. ಈಗ ನಿನ್ನ ಕಾಲ ಕೆಳಗೆ ಹಾಕಿದ್ದಾರೆ. ಯಾರೂ ಕೂಡ ಶಾಶ್ವತವಲ್ಲ. ನಾಳೆ ನಿನ್ನ ಸ್ಥಿತಿಯೂ ಇಷ್ಟೆ. ನೀನು ನನ್ನ ಮೇಲಿನ ಹಂತವಾಗುವೆ. ನೀನು ಇಷ್ಟೋಂದು ಹರ್ಷಿಸಿದ್ದು ನೋಡಿ ನಗು ಬಂತು" ಎಂದಿತು. ಆಗ ಆತ ತಲೆ ತಗ್ಗಿಸಿದ. ಆ ವ್ಯಕ್ತಿ ಏನು ಎಲ್ಲರೂ ಅಂಥವರೇ

ನಾವು ಶಾಶ್ವತ ಎಂಬ ಭಾವ ಬಂದುದರಿಂದ ಮನುಷ್ಯ ಜೀವನದಲ್ಲಿ ನೆಮ್ಮದಿ ಕಳೆದು ಕೊಳ್ಳುತ್ತಾನೆ. ಆ ಕಾರಣ ಶರಣರು ಹೇಳಿದುದು, ಸಿರಿಯ ಸಂಪದವು ನಂಬಿ ನೀಕೆಡಬೇಡ ಅದು ನೀರ ಮೇಲಣ ಗುಳ್ಳೆ. ನೀಶಾಶ್ವತ ವೆಂದರಿಯ ಬೇಡ ಅಲ್ಲಿಯೂ ಇಲ್ಲಿಯೂ ಸಲ್ಲುವ ಕಾರ್ಯಮಾಡು ಅಶೆ ಸಲ್ಲದು, ಎಂದು ಬುವಿಗೆ ಬಂದಂತೆ ಮರಳುವವರಗೆ ಇನ್ನೇನು ಬೇಕು ಎಂದು ಆಲೋಚಿಸಿ ಮನ ನಿರ್ಲಿಪ್ತತೆ ಯಿಂದ ಕೂಡಿದಾಗ ಮಾತ್ರ ನಮ್ಮೆಲ್ಲರ ಜೀವನ ಸುಖಮಯವಾಗುವುದು.

---

# ಕ್ರೋಮಿಯಂ ಬಗ್ಗೆ ನೀವೆಷ್ಟು ಬಲ್ಲಿರಿ ?

ಶ್ರೀ ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿನಿಲಯ, ಮಚ್ಚಿನ ಅಂಚೆ-574295 (ದ. ಕ.)

ಕಬ್ಬಿಣವನ್ನು ಸ್ಟೈಯಿನ್‌ಲೆಸ್ ಸ್ಟೀಲನ್ನಾಗಿ ಪರಿರ್ತಿಸಿ, ಅದರಿಂದ ದಿನ ಬಳಕೆಯ ನೂರಾರು ವಸ್ತುಗಳನ್ನು ತಯಾರಿಸಬೇಕಾದರೆ ಅದಕ್ಕೆ ಕ್ರೊಮಿಯಂ ಅದುರನ್ನು ಬೆರೆಸುವುದು ಅನಿವಾರ್ಯ. ಈ ಕ್ರೋಮಿಯುಮ್ಮನ್ನು ಲೋಹದ ಸಾಮಗ್ರಿಗಳ ಮೇಲೆ ಲೇಪಿಸಿದಾಗ ಬೆಳ್ಳಿಯಂತಹ ಹೊಳಪು ಬರುವುದು. ಸಾಂಗೆ ವಾಹನಗಳ ಬಿಡಿಭಾಗಗಳಿಗೆ ಈ ಲೇಪನ ನೀಡಿದರೆ ಹೊಳಪು ಮಾತ್ರವಲ್ಲ, ಅದು ತುಕ್ಕನ್ನು ನಿರೋಧಿಸುವುದೆಂದು ಗೊತ್ತಾಗಿದೆ.

ಹಲವು ಕೈಗಾರಿಕೆಗಳಲ್ಲಿ ಬಳಸಲ್ಪಡುವ ಕ್ರೋಮಿಯಂ, ಗಣಿಗಳಲ್ಲಿ ಕ್ರೋಮೈಟ್ ಎಂಬ ಹೆಸರಿನಿಂದ ಆಕ್ಸೈಡ್ ರೂಪದಲ್ಲಿ ಸಿಗುತ್ತದೆ. ಇದರಲ್ಲಿ ಎರಡು ರೀತಿಗಳಿವೆ, ಒಂದು ವಿಧದಲ್ಲಿ ಕಬ್ಬಿಣವು ಬೆರೆತಿರುವುದು. ಈ ಅದಿರನ್ನು ಕಂಡುಹಿಡಿದದ್ದು ೧೭೮೭ ರಲ್ಲಿ ವ್ಯಾಂಕ್ವೆಲಿನ್ ಎಂಬ ವಿಜ್ಞಾನಿ. ಇದಕ್ಕೆ ಗ್ರೀಕ್ ಭಾಷೆಯಲ್ಲಿ "ಕ್ರೋಮ್" ಅಂದರೆ ಬಣ್ಣ ಎಂಬ ಹೆಸರು ಬಂತು. ಇದರ ಉತ್ಪನ್ನ ಭೂಮಿಯೊಳಗೆ ಸಾಕಷ್ಟಿದ್ದರೂ ಮೊದಲನೆಯ ಮಹಾಯುದ್ಧದವರೆಗೆ ಬಳಕೆ ಇರಲಿಲ್ಲ. ಯುದ್ಧಕಾಲದಲ್ಲಿ ಕೋವಿಗಳ ಗುಂಡು ತಯಾರಿಸಲು ಇದು ಉತ್ತಮ ಅದಿರೆನಿಸುದದರಿಂದ ಕ್ರೋಮಿಯಂ ತೆಗೆಯುವ ಕಾರ್ಯ ಆರಂಭವಾಯಿತು. ಕ್ರೋಮಿಯಂ ಕ್ರೊಕಾಯಿಟ್‌ನಂತಹ ಬೇರೆ ಕೆಲವು ಅದಿರುಗಳಲ್ಲೂ ಬೆರೆತಿರುವುದು ಗೊತ್ತಾಯಿತು.

ಇಂಗಾಲದದೊಂದಿಗೆ ಕೂಡಲೇ ಬೆರೆಯಬಲ್ಲ ಕ್ರೊಮಿಯಂಗೆ ಬೆಳ್ಳಿಯಷ್ಟೇ ಹೊಳಪಿದೆ. ಆದರೆ ಕಾಠಿಣ್ಯದಲ್ಲಿ ವಜ್ರಕಿಂತ ಅನಂತರದ ಸ್ಥಾನ ಪಡೆದಿದೆ. ಗಣಿಗಳಿಂದ ಇದರ ಅದಿರನ್ನು ತೆಗೆದು ಹುಡಿಮಾಡಿ ಇಳಿಜಾರಾಗಿ ಹರಿಯುವ ನೀರಿನಲ್ಲಿ ತೊಳೆದಾಗ ಜೊತೆಗೆ ಬೆರೆತಿರುವ ನಿರರ್ಥಕ ಪದಾರ್ಥಗಳೆಲ್ಲ ಹರಿದುಹೋಗಿ ಲೋಹದ ಅಂಶಉಳಿಯುವುದು. ಈ ಅಂಶವನ್ನು ಸಣ್ಣ ಹಾಗೂ ಸೋಡಿಯಂ ಕಾರ್ಬೊನೇಟ್‌ನೊಂದಿಗೆ ಬೆರೆಸಿ ಕುಲುಮೆಯಲ್ಲಿ ಸೋಡಿಯಂ ಕ್ರೊಮೇಟ್ ಎಂಬ ವಸ್ತು ಸಿದ್ಧವಾಗುತ್ತದೆ. ಬಳಿಕ ಇದಕ್ಕೆ ಗಂಧಕ ಅನಂತರ ಅಲ್ಯುಮಿನಿಯಂ ಸಂಸ್ಕರಣೆ ನಡೆಸುವುದರಿಂದ ಬಹೂಪಯೋಗಿ ಕ್ರೋಮಿಯಂ ಲಭಿಸುವುದು.

ಭಾರತವೂ ಸೇರಿದಂತೆ ಪಾಕಿಸ್ತಾನ, ರಷ್ಯಾ, ದಕ್ಷಿಣ ಆಫ್ರಿಕಾ, ಟರ್ಕಿ, ರೋಡಿಷಿಯಾ ಮೊದಲಾದೆಡೆಗಳಲ್ಲಿ ಕ್ರೋಮಿಯಂಸಿಗುವುದು. ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ತಮಿಳುನಾಡಿನ ಕೆಲವೆಡೆ ಇದರ ಧಾರಳ ಉತ್ಪನ್ನವಿದೆ

ಕ್ರೋಮಿಯಂಗೆ ತುಕ್ಕು ಹಿಡಿಯುವ ಭಯ ಇಲ್ಲ. ಹವಾಮಾನದ ಒತ್ತಡ
ಗಳಿಗಾಗಲೀ ಯಾವುದೇ ಆಮ್ಲಗಳ ದುಷ್ಪರಿಣಾಮಗಳಾಗಲೀ ಸಿಲುಕದ ಹಾಗೆ
ಇದನ್ನು ರೂಪಿಸಿಲುವುದರಿಂದ ಅನೇಕ ಉದ್ಯಮಗಳಿಗೆ ಅದು ಅತ್ಯಗತ್ಯವೆನಿಸಿದೆ.

ಶುದ್ಧವಾದ ಕ್ರೋಮಿಯಂನ ಬಳಕೆ ಒಂದು ಮಾತ್ರ. ತಾಮ್ರ,
ಹಿತ್ತಾಳೆ, ನಿಕ್ಕಲ್ ಮುಂತಾದ ಲೋಹದ ಸಾಮಗ್ರಿಗಳು ಬೆಳ್ಳಿಯಂತೆ ಹೊಳಪು
ಪಡೆಯಲು ಇದನ್ನು ಎಲೆಕ್ಟ್ರೋ ಪ್ಲೇಟಿಂಗ್ ಮಾಡುತ್ತಾರೆ. ಆದರಿಂದ ಅವು
ನಿರಂತರವಾಗಿ ಹೊಳೆಯುತ್ತವೆ. ಜಂಗುಬರವುದಿಲ್ಲ, ಸವೆಯುವುದಿಲ್ಲ. ಇತರ
ಲೋಹಗಳಿಗೆ ಕ್ರೋಮಿಯಂನ್ನು ಬೆರೆಸಿದರೆ ಅನೇಕ ಲಾಭಗಳಿವೆ. ಅರಿಸಿಣದ
ಸಂಸ್ಕರಣೆಗೂ ಕ್ರೋಮಿಯಂ ಬೇಕಾಗುವುದು.

ಬೇರೆ ಬೇರೆ ಪ್ರಮಾಣದಲ್ಲಿ ಕ್ರೊಮಿಯಂ ಬೆರೆಸಿ ಸ್ಟೀಲುಗಳನ್ನು ತಯಾರಿ
ಸುವುದರಿಂದ ಹೆಚ್ಚು ಕಾಂತಿ, ಕಣತೆ, ನಯ ತುಕ್ಕು ಮತ್ತು ವಿದ್ಯುತ್ ನಿರೋಧಕ
ಶಕ್ತಿ ಇರುತ್ತದೆ. ರೈಲು ಬೋಗಿಗಳು, ಸಾರಿಗೆ ವಾಹನಗಳು, ಸೇತುವೆಗಳು, ಟ್ಯಾಂಕ್
ಗಳನ್ನು ತಯಾರಿಸಲು ಶೇ ೪ರಷ್ಟು ಕ್ರೋಮಿಯಂ ಬೆರಿಸಿದರೆ ಸಾಕಾಗುವುದು.
ಗೃಹ ಬಳಕೆಯ ಪಾತ್ರೆಗಳು, ಚೂರಿಗಳನ್ನು ತಯಾರಿಸಲು ಅದನ್ನು ಶೇ ೧೨ ರಷ್ಟು
ಬೆರಸಬೇಕಾಗುತ್ತದೆ.

ಕಠಿಣತೆಗೆ ಹೆಸರಾದ ಕ್ರೊಮಿಯಂ ವಿಮಾನ ಮತ್ತು ಯುದ್ಧನೌಕೆಗಳ
ಹೊರಮೈಯ ನಿರ್ಮಾಣಕ್ಕೆ ಅಗತ್ಯ. ರಾಸಾಯನಿಕ ಸ್ಥಾವರಗಳ ನಿರ್ಮಾಣ,
ಸಮುದ್ರದ ತಾಂತ್ರಿಕ ವ್ಯವಸ್ಥೆಗಳು, ಹೈನೋದ್ಯಮ, ವಿದ್ಯುದುತ್ಪನ್ನಗಳಿಗೆ ಇದು
ಬೇಕಾಗುತ್ತದೆ. ಶುದ್ಧವಲ್ಲದ ಕ್ರೋಮಿಯಂ ಅದುರು ಕೂಡ ಉಪಯೋಗದಿಂದ
ಹಿಂದೆ ಬಿದ್ದಿಲ್ಲ. ಅಗ್ನಿ ನಿರೋಧಕವಾದ ಇಟ್ಟಿಗೆಗಳು, ಸಿಮೆಂಟ್ ಮತ್ತು ಪ್ಲಾಸ್ಟರ್
ಕಾರ್ಯಗಳಿಗೆ ಇದರ ಬಳಕೆ ಅಧಿಕವಾಗಿದೆ.

ಕಲಾವಿದರು ಬಳಸುವ ನಾಲ್ಕು ತೈಲ ವರ್ಣಗಳ ತಯೂರಿಕೆಗೆ ಕ್ರೋಮಿಯಂ
ಸೇರುತ್ತದೆ. ಆದರಿಂದ ಸಿಗುವ ಲೆಡ್ ಕ್ರೊಮೇಟ್ ರಾಸಾಯನಿಕ ಬಳಸಿ, ಕೆಂಪು,
ನೀಲಿ, ಹಸಿರು, ಅರಶಿನ ಬಣ್ಣಗಳನ್ನು ಸಿದ್ಧಪಡಿಸುತ್ತಾರೆ.

ಕ್ರೋಮಿಯಂನಿಂದ ಪಡೆದ ಎರಡು ಬಗೆಯ ಲವಣಗಳು ಹಲವು ಬಣ್ಣಗಳ
ತಯೂರಿಕೆಗೆ ಅಗತ್ಯವಲ್ಲದೆ ಕ್ಯಾಲಿಕೋ ಮುದ್ರಣ ಮತ್ತು ಛಾಯಾಚಿತ್ರ ಸಂಸ್ಕರಣೆಗೆ
ನೆರವಾಗುತ್ತವೆ.

ತೊಗಲು ಹದ ಮಾಡುವಾಗಲೂ ಈ ಲವಣಗಳ ಬಳಕೆ ಉಂಟು. ಜಾಗತಿಕ ಉತ್ಪನ್ನದ ಪ್ರತಿಶತ ೪೫ ಭಾಗ ಕ್ರೋಮಿಯನಿಂದ ಮಿಶ್ರಲೋಹಗಳನ್ನೂ ಪ್ರತಿಶತ ೪೦ ಭಾಗದಿಂದ ಅಗ್ನಿನಿರೋಧಕ ವಸ್ತುಗಳನ್ನೂ ತಯಾರಿಸಿ ಉಳಿದುದನ್ನ ರಾಸಾಯನಿಕ ಪ್ರಯೋಗಗಳಿಗೆ ಬಳಸುತ್ತಾರೆ. ನಮ್ಮ ದೇಶದಲ್ಲಿ ಇದರ ವಾರ್ಷಿಕ ಉತ್ಪನ್ನ ೩ ಲಕ್ಷ ಟನ್ನುಗಳಷ್ಟಿದೆ.

ಗಂಧಕಾಮ್ಲ ಮತ್ತು ಹೈಡ್ರೋಕ್ಲೋರಿಕ್ ಆಮ್ಲಗಳಲ್ಲೂ ಸಂಸ್ಕರಿತ ಕ್ರೋಮಿಯಂ ಕರಗುವುದಿಲ್ಲವೆಂಬುದೇ ಅದರ ವೈಶಿಷ್ಟ್ಯ.

## ನಾಗ ಪಂಚಮಿ ಜಾನ ಪದಗೀತೆ

ಮಂದಾಕಿನೀದೇವಿ, ಮಾನವತಾ ಪ್ರತಿಷ್ಠಾನ, ಧಾರವಾಡ.

ಅಕ್ಕತಂಗೆರು ನಾವು ಅಕ್ಕರದಿ ಆಡೋಣು
ವಟ್ಟಾಗಿ ಹಾಡಿ ಕರಿಯೂಣು ಅಣ್ಣಯ್ಯ
ಪಂಚಮಿಗೀ ಮುಂಚೆ ಬರಲೇಳ........

ಪಂಚಮಿಗೀ ಮುಂಚೆ ಕರಿದರ ಅಣ್ಣಯ್ಯ
ಬಿಡುವಿಲ್ಲ ಅಂತ ಹೇಳ್ಯಾನ ಹಬ್ಬಕ್ಕ
ರನ್ನದುಂಗುರ ಕಳಿಸ್ಯಾನ........

ರನ್ನದುಂಗುರ ಬ್ಯಾಡ ಅಣ್ಣನೀ ಬಾ ಅಂದ್ರ
ಮರು ಪಂಚಮಿಗೀ ಬರುತ್ತೇನ ತಂಗ್ಯವ್ವ
ಮುತ್ತಿನ್ನಾವಲಿಯ ಹಿಡಿಯೆಂದ........

ಮುತ್ತಿನ್ನಾವಲಿಯ ಬ್ಯಾಡ ಮುತ್ತಿನಂಥಣ್ಣಯ್ಯ
ಹಿತ್ತಲ ಬಳ್ಳಿ ಒಣಗೇದ ಹಬ್ಬಕ್ಕ
ಹೊತ್ತುತಾ ಒಲವಿನುದಕಾವ........

ಹೊತ್ತು ತಾ ಒಲವಿನ ಉದಕಾವ ಎನ್ನುತ್ತ
ಭಕ್ತೀಲೆ ಬಾಗಿ ಕರಿದರ ಅಣ್ಣಯ್ಯ
ಹುತ್ತದಾಗ ಬಂದು ನಿಂತಾನ

ಹಾಡಿದ್ದು ಕುಮಾರಿ ಯಮುನಾ

## ವಿದ್ಯಾರ್ಥಿ ಜೀವನದ ಬೆಳಕು ಸರಣಿ – ೧೧

## ಅಶಿಸ್ತಿನಿಂದಾಗುವ ದುಷ್ಫಲಗಳು

ಶ್ರೀ ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾ ವಿಲಾಸ ರಸ್ತೆ, ಮೈಸೂರು - 570 024

ವಿದ್ಯಾರ್ಥಿಗಳು ಮುಖ್ಯವಾಗಿ ಗಮನಿಸಬೇಕಾದ ವಿಷಯಗಳು ಇಂತಿವೆ. ನೀವು ಶಾಲಾಕಾಲೇಜು ವ್ಯಾಸಂಗ ಪೂರ್ಣಮಾಡಿ, ವ್ಯಾಸಂಗ ಮಾಡಿದ ಸಂಸ್ಥೆಗಳನ್ನು ಬಿಟ್ಟು ಹೊರಟುಹೋಗುತ್ತೀರಿ. ಆಗ ನಿಮಗೆ ಸಂಸ್ಥೆಯ ಅಧಿಕಾರಿಗಳು 'ಲೀವಿಂಗ್' ಸರ್ಟಿಫಿಕೇಟುಗಳನ್ನು ಕೊಡುತ್ತಾರಷ್ಟೇ ? ಆ ಸಮಯದಲ್ಲಿ ನೀವು ವಿದ್ಯಾಲಯಗಳಲ್ಲಿ ನಡೆದುಕೊಂಡ ರೀತಿಗೆ ಸಂಕೇತವಾದ ಸನ್ನಡತೆ ವಿಚಾರದಲ್ಲಿ ಸರ್ಟಿಫಿಕೇಟನ್ನು ತಿರುಚಿ ಕೊಡಬಹುದು ಇದರಿಂದ ನಿಮಗೆ ಹಾನಿಯಲ್ಲವೇ ? ಯೋಚಿಸಿ !

ಅಲ್ಲದೆ ಕೆಲವು ವೇಳೆ ನಿಮಗೆ ಯೋಗ್ಯತಾ ಪತ್ರ ಕೊಡುವ ಸಂದರ್ಭದಲ್ಲಿ ಕೊಡದೆ ನಿರಾಕರಿಸಬಹುದು. ನೀವು ಶಾಲಾಕಾಲೇಜುಗಳಲ್ಲಿ ಅಭ್ಯಾಸ ಮಾಡುವಾಗ ದುಶ್ಚಟಗಳಾದ ಬೀಡಿ ಸಿಗರೇಟುಗಳನ್ನು ಸೇದಿ ಆವರಣಗಳಲ್ಲಿ ಹೊಗೆಬಿಟ್ಟು ವಾತಾವರಣವನ್ನು ಮಲಿನಮಾಡುವುದು ಕೆಟ್ಟ ಚಾಳಿ. ಈ ವಿಷಯ ನೀವು ತಿಳಿದೂ ಸಹ ಮಾಡುವುದು ಅಪರಾಧವಾದುದರಿಂದ ನಿಮ್ಮ ತರಗತಿಗೆ ಬರದಂತೆ ನಿರಾಕರಿಸುತ್ತಾರೆ. ದಂಡ ಹಾಕಲೂ ಬಹುದು. ನಿಮಗೆ ಪೀರಿಯಡ್ ಮುಗಿದು ತರಗತಿಯಿಂದ ಹೊರಗೆ ಹೋಗುವಾಗ ಬೇರೆ ತರಗತಿಗಳ ಪಾಠ ನಡೆಯುತ್ತಿರುವಲ್ಲಿ ನಿಮ್ಮ ಜೊತೆ ಹುಡುಗರೊಂದಿಗೆ ಗಟ್ಟಿಯಾಗಿ ಮಾತನಾಡುವುದಾಗಲಿ, ಕಿರಿಚುವುದಾಗಲಿ, ಮಾಡಿದಲ್ಲಿ ಆ ತರಗತಿಯ ಪಾಠಗಳಿಗೆ ತೊಂದರೆ ಆಗುವ ಪ್ರಜ್ಞೆ ಮೂಡಬೇಕು. ಹೀಗೆ ಮಾಡದಿದ್ದಲ್ಲಿ ನಿಮಗೆ ಶಿಕ್ಷೆಯಾಗುವುದು ಯಾವರೀತಿಯಿಂದಲೂ ತಪ್ಪದು. ಇವೆಲ್ಲವೂ ಶಿಕ್ಷಣ ಕ್ರಮದ ಅಶಿಸ್ತು ಎನ್ನಿಸಿಕೊಳ್ಳುತ್ತದೆ. ಈ ಹೀನ ನಡವಳಿಕೆಗಳಿಂದ ನಿಮ್ಮ ವಿದ್ಯೆಗೆ ಮಸಿಬಳಿದಂತಾಗುತ್ತದೆ. ನಿಮ್ಮ ಓದು ಎಷ್ಟೇಹೆಚ್ಚಿದ್ದರೂ ಯಾರೂ ಬೆಲೆಕೊಡರು. ನಿಮ್ಮನ್ನು ಹೀನವಾಗಿ ಕಾಣುತ್ತಾರೆ.

ಯಾವುದೇಕಾರಣದಿಂದಾಗಲಿ ವಿದ್ಯಾರ್ಥಿಗಳು ನಿಮ್ಮ ಜೊತೆಹುಡುಗರೊಂದಿಗೆ ಗುಂಪುಕೂಡಿ ನಿಮ್ಮ ವಿದ್ಯಾ ಸಂಸ್ಥೆಯ ಮೊಗಸಾಲೆಯಲ್ಲಾಗಲಿ, ಓಡಾಡುವ ಮಧ್ಯಂತರ ಪ್ರದೇಶದಲ್ಲಾಗಲಿ ಕಿರುಚಾಟ, ಗುದ್ದಾಟ ಮಾಡುವ ಹೀನ ನಡವಳಿಕೆ. ಇದರಿಂದ ನಿಮಗೆ ಕಾಲೇಜು ಅಥವಾ ಶಾಲಾ ಮುಖ್ಯಸ್ಥರಿಂದ ಯಾವುದೊಂದು ರೀತಿಯಲ್ಲಾದರೂ ಶಿಕ್ಷೆ ತಪ್ಪದು.

ವಿದ್ಯಾರ್ಥಿಗಳು ಓದಿಗೆ, ವ್ಯಾಸಂಗಕ್ಕೆ ಮಾತ್ರ ಗಮನಕೊಡಬೇಕೇ ವಿನಾ ರಾಜಕೀಯ, ಅಥವಾ ಯಾವುದೇ ಗೊಂದಲಗಳಲ್ಲಾಗಲಿ ಬೆರೆಯಬಾರದು. ಇದ-ರಿಂದ ಕಲಿಕೆಗೆ ತಡೆಯಾಗಿ ಭವಿಷ್ಯ ಹಾಳಾಗುತ್ತದೆ. ಪರೀಕ್ಷೆಗಳ ಸಮಯದಲ್ಲಿ ಹೆಚ್ಚು ಜಾಗರೂಕರಾಗಿರಬೇಕು. ಪರೀಕ್ಷೆಗಳ ಸಮಯದಲ್ಲಿ ಸಕಾಲದಲ್ಲಿ ಬಾರದೆ ನಿಧಾನ ಮಾಡಿದಲ್ಲಿ ಪರೀಕ್ಷೆ ನಡೆಯುವ ಕೊಠಡಿಗಳಿಗೆ ಪ್ರವೇಶ ನೀಡುವುದಿಲ್ಲ. ಇದರಿಂದ ಅನುತ್ತೀರ್ಣರಾಗುವ ಪಟ್ಟಿಗೆ ಸೇರಿದಂತಾಗುವಿರಿ. ಆದಕಾರಣ ನಿಮ್ಮ ಒಂದು ವರ್ಷ ಓದಿದ ವ್ಯಾಸಂಗ ಹಾಳಾಗಿ ಓದಿದ ಹಳೇ ತರಗತಿಯಲ್ಲೇ ಉಳಿದು ಓದಬೇಕಾಗುತ್ತದೆ. ಭವಿಷ್ಯತ್ತಿನ ಏಳಿಗೆಗೆ ಕಲ್ಲುಬಿದ್ದಂತೆ !

ವಿದ್ಯಾರ್ಥಿಗಳು ಪರೀಕ್ಷೆಗಳಿಗೆ ಹಾಜರಾಗಿ, ಪಕ್ಕದಲ್ಲಿ ಕುಳಿತು ಉತ್ತರ ಬರೆಯುತ್ತಿರುವ ಸಹ ವಿದ್ಯಾರ್ಥಿಗಳ ಉತ್ತರದ ಪತ್ರಿಕೆಗಳನ್ನು ನಕಲುಮಾಡಿ ನೀವು ಉತ್ತರ ಬರೆದಿದ್ದು ಅಲ್ಲಿ ನೇಮಿಸಿದ್ದ ಅಧಿಕಾರಿಗೆ ಕಂಡುಬಂದಾಗ ನೀವು ಬರೆದಿದ್ದ ಉತ್ತರ ಪತ್ರಿಕೆಗಳನ್ನು ಕಿತ್ತುಕೊಂಡು ಹೊರಗೆ ದಬ್ಬುವುದಲ್ಲದೆ ಶಿಕ್ಷೆಗೆ ಗುರಿ ಮಾಡದೆ ಬಿಡುವುದಿಲ್ಲ. ಈ ಅಕ್ರಮ ಮುಂದುವರೆದಲ್ಲಿ ನಿಮ್ಮನ್ನು ಕೆಲವು ವರ್ಷಗಳ ಕಾಲ ಪರೀಕ್ಷೆಗಳಿಗೆ ಕೂಡದಂತೆ ಬಹಿಷ್ಕರಿಸುತ್ತಾರೆ, ತಿಳಿಯಿರಿ.

ಪರೀಕ್ಷೆಗೆ ಕೂಡಿಸಲು ಸಾಕಾಗುವಷ್ಟು ದಿನಗಳು ತಾವು ಓದುವ ತರಗತಿ ಗಳಿಗೆ ಹಾಜರಾತಿ ಇರಲೇಬೇಕು ಮತ್ತು ಡ್ರಿಲ್, ಎನ್.ಸಿ.ಸಿ. ಹಾಜರಾತಿಯೂ ಇರಬೇಕು. ಇಲ್ಲವಾದರೆ ಪರೀಕ್ಷೆಗೆ ಕಟ್ಟಿಸುವುದಿಲ್ಲ. ಇದಲ್ಲದೆ ಶಾಲಾಕಾಲೇಜುಗ ಳಲ್ಲಿ ವರ್ಷಂಪ್ರತಿ ಪ್ರತಿ ತಿಂಗಳೂ ಸಲ್ಲಿಸುವ ಫೀಜನ್ನು ಪೂರ್ತಿ ಕಟ್ಟಿರಬೇಕು. ಬಾಕಿ ಇದ್ದ ಸಂದರ್ಭದಲ್ಲಿ ಪರೀಕ್ಷೆಗೆ ಕಟ್ಟುವ ಮುಂಚೆ ಚುಕ್ತಾ ಮಾಡದಿದ್ದರೆ ಪರೀಕ್ಷೆಗೆ ಕಟ್ಟಿಸುವುದಿಲ್ಲವಃದಕಾರಣ ನಿಮ್ಮ ಒಂದು ವರ್ಷದ ವಿದ್ಯೆ ಹಾಳಾಗುತ್ತದೆ.

ಆದ್ದರಿಂದ ಈ ಮೇಲೆ ತಿಳಿಸಿದ ಕಾರಣಗಳಿಗೆ ನಿಯಮಗಳನ್ನು ಅಧರಿಸಿ ನಡೆಯುವ ಶಿಸ್ತುಗಳಿಂದ ನಡೆಸಿದ ನಿಮ್ಮ ವ್ಯಾಸಂಗಕ್ಕೆ ಅರ್ಥವಿದೆ, ಬೆಲೆಯಿದೆ. ವಿದ್ಯಾರ್ಥಿಗಳು ಮುಂದಿನ ನಿಮ್ಮ ಶ್ರೇಯಸ್ಸಿಗೆ ನೀವೇ ಕಾರಣವೆಂಬುದನ್ನು ಮರೆಯದಿರಿ !



## " ಕನ್ನಡ ಜನತೆಗೆ ಕನ್ನಡವೇಗತಿ "

ಜೆ. ಬಿ. ಲಿಂಗರಾಜು, ಕಲ್ಲುಸಾದರಹಳ್ಳಿ.

ಕನ್ನಡ ಧ್ವಜವ ಹಾರಿಸಬನ್ನಿರಿ
ರಾಜ್ಯೋತ್ಸವದ ಶುಭದಿನದಿ
ಕನ್ನಡಿಗರುನಾವೆನ್ನುತ ನಿಲ್ಲಿರಿ
ಕನ್ನಡಾಂಬೆಯ ಉತ್ಸವದಿ.
ಕನ್ನಡ ಜನತೆಗೆ ಕನ್ನಡವೇಗತಿ
ಕರ್ಣಾನಂದದ ಜಯಧ್ವನಿಯು
ಕನ್ನಡ ಮಾತೆಗೆ ಬೆಳಗಿದ ಜ್ಯೋತಿ
ಕರ್ಣಾಟಕದಿ ಹಾರಿದೆ ಧ್ವಜವು.
ಕನ್ನಡ ಜನತೆಯ ಜೈಜೈ ಕಾರವು
ಪ್ರತಿಧ್ವನಿ ತಳೆದಿದೆ ಗಿರಿಗಳಲಿ!
ಕನ್ನಡ ಕುಲಕೋಟಿಯು ನಮಿಸಿದೆ
ಚಾಮುಂಡಿದೇವಿಯ ಚರಣದಲಿ.
ಶ್ರೀಗಂಧದ ಪರಿಮಳ ಗಾಳಿಯ ಸೇರಿ
ಸಂತಸ ತಂದಿದೆ ನಾಡಿನೊಳು
ಕಸ್ತೂರಿಯ ಸುರಿಮಳೆ ಹೂಗಳರಾಶಿ
ಸಂಭ್ರಮ ಬಿಂಬಿಸಿ ಹಾಡಿನೊಳು.
ಸವಿಗನ್ನಡದ ಸುಧೆಯನು ನೀಡಿ
ಗಾಯನ ನೃತ್ಯದ ಮೇಳದಲಿ
ಸಿರಿಗನ್ನಡದ ನುಡಿಯನು ಹಾಡಿ
ಬಾಳಿನೈಕ್ಯತೆಯ ಗಾನದಲಿ.
ನವ ಚೈತನ್ಯವ ನೀಡಲಿತಾಯಿ
ಕನ್ನಡಮಾತೆಗೆ ಶರಣಾಗಿ,
ಸವಿಗನ್ನಡವನೇ ನುಡಿಯಲಿ ಬಾಯಿ
ಕನ್ನಡ ಭಾಷೆಗೆ ಶುಭವಾಗಿ.

# ಒಂದು ಪತ್ರ

ದಿನಾಂಕ 28 - 8 - 91
ಮೈಸೂರು

ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದಂತ ಶ್ರೀ ಶ್ರೀ ಗಳವರ ದಿವ್ಯ ಪಾದಕಮಲಗಳಲ್ಲಿ ತಮ್ಮ ಬಾಲಕನಾದ ಗೋವಿಂದರಾಜುವಿನ ನಮಸ್ಕಾರಗಳು.

ಸ್ವಾಮೀಜಿ,

ಕಳೆದ ಸುಮಾರು 3 ತಿಂಗಳ ಹಿಂದೆ ತಮ್ಮನ್ನು ಭೇಟಿಮಾಡಿದಾಗ ನಾನು K.A.S. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ, B.D O.ಆಗಿ ಆಯ್ಕೆಯಾಗಿರುವ ವಿಷಯವನ್ನು ತಿಳಿಸಿದ್ದೆ. ಹೆಚ್ಚಿನ ತಯಾರಿ ನಡೆಸಿ ಪರೀಕ್ಷೆಯನ್ನು ಬರೆದಿದ್ದ ನಾನು! ಸಹಜವಾಗಿ 'ಅಸಿಸ್ಟೆಂಟ್ ಕಮೀಷನರ್' ಹುದ್ದೆಗೆ ಆಯ್ಕೆಯಾಗಬಹುದೆಂದು ನಿರೀಕ್ಷಿಸಿದ್ದೆ. ನನಗಿಂತ ಕಡಿಮೆ ಅಂಕಗಳಿಸಿರುವ ಅನೇಕರು ಇನ್ನೂ ಉತ್ತಮ ಹುದ್ದೆಗಳಿಗೆ ಆಯ್ಕೆಯಾಗಿದ್ದರೂ ನಾನು General Merit ನಲ್ಲಿ ಬಂದ ಕಾರಣ B. D. O. ಹುದ್ದೆಗೆ ತೃಪ್ತಿಪಡಬೇಕಾಯ್ತು. ತಮಗೆ ತಿಳಿದಂತೆ ಈ ಹಿಂದೆ ನಾನು Telecom. ಇಲಾಖೆಯಲ್ಲಿ Junior Telecom officer ಆಗಿ ಕೆಲಸ ನಿರ್ವಹಿಸುತ್ತಿದ್ದೆ. ಈಗ ರಾಜೀನಾಮೆ ನೀಡಿ B. D. O. (p) ಆಗಿ ಮೈಸೂರಿನಲ್ಲಿರುವ Administrative Training Institute ತರಬೇತಿ ಪಡೆಯುತ್ತಿದ್ದೇನೆ.

ಹಳ್ಳಿಯಲ್ಲಿ ಕೂಲಿಕಾರನಾಗಿ ಕೆಲಸ ಮಾಡಬೇಕಾಗಿದ್ದ ಈ ಬಾಲಕನನ್ನು ತಾವು 5 ನೇ ತರಗತಿಯಿಂದ 3 ನೇ B.Sc., ಯವರೆಗೆ ವಿದ್ಯೆ, ಊಟ ವಸತಿಗಳನ್ನು ನೀಡಿ ಮನುಷ್ಯನನ್ನಾಗಿ ಮಾಡಿದಿರಿ. ನಾನು ತಿನ್ನುವ ಪ್ರತಿಯೊಂದು ತುತ್ತಿನ ಹಿಂದೆ ತಮ್ಮ ಪರಿಶ್ರಮ ಇದೆ. ಈ ಮಾತನ್ನು ಹೇಳುವಾಗ ನನಗೆ ಕಣ್ಣೀರು

ಬರುತ್ತದೆ. ಮನೆಗೆ ಹಿರಿಯಮಗನಾದ ನನಗೆ ಇನ್ನೂ ನಾಲ್ಕು ಜನ ಸಹೋದರರು ಮತ್ತು ಇಬ್ಬರು ಸಹೋದರಿಯರಿದ್ದಾರೆ, ನನಗೀಗ 2 ಮಕ್ಕಳು(1 ಹೆಣ್ಣು ಮಗು 6 ವರ್ಷ, ಗಂಡುಮಗು 3 ವರ್ಷ )

ಹಳ್ಳಿಯಲ್ಲಿ ಯಾವುದೇ ವರಮಾನವಿಲ್ಲದ ಪ್ರಯುಕ್ತ ತಾಯಿಯನ್ನೊಳಗೊಂಡು, ಸಹೋದರರು ಸಹೋದರಿಯರು ಎಲ್ಲರನ್ನೂ ಬೆಂಗಳೂರಿನಲ್ಲಿ ನನ್ನೊಟ್ಟಿಗಿಟ್ಟುಕೊಂಡು ತಾವು ನನಗೆ ಸಾಕಿದ ಹಾಗೆ, ತಮ್ಮ ನೆನಪಿನಲ್ಲಿ, ನನ್ನ ಕುಟುಂಬದವರಿಗೆ ತಾವು ನೀಡಿದ ಅನ್ನವನ್ನು ಹಂಚಿಕೊಂಡು ವಾಸಮಾಡುತ್ತಿದ್ದೇನೆ.

ಶ್ರೀ ಕ್ಷೇತ್ರದಲ್ಲಿ ನಾನುಪಡೆದ ಸವಲತ್ತುಗಳಿಗೆ ಪ್ರತಿಯಾಗಿ ಋಣವನ್ನು ತೀರಿಸಲು ಸಾಧ್ಯವಿಲ್ಲ. ಬದಲಾಗಿ ಋಣದ ಸಂಕೇತವಾಗಿ ಪ್ರತಿ ತಿಂಗಳು ಕೈಲಾದಷ್ಟು ಹಣವನ್ನು M.O. ಮೂಲಕ ತಿಂಗಳಿಗೆ 2 ತಿಂಗಳಿಗೆ ಈ ಪ್ರಕಾರ ತಲುಪಿಸುತ್ತಿರುವುದು ಮತ್ತು ತಮ್ಮಿಂದ ಆಶೀರ್ವಾದದ ಪತ್ರ ಬರುವುದು ತಿಳಿದವಿಷಯವೆ.

ಇತ್ತೀಚಿನ ನನ್ನ ಸಹೋದರನೊಬ್ಬ Assistant Commissoner ಆಗಿ ಆಯ್ಕೆಯಾಗಿ ಇದೀಗ ತರಬೇತಿಯಲ್ಲಿದ್ದಾನೆ. ಇನ್ನೋರ್ವ M.A ವ್ಯಾಸಂಗ ಮಾಡುತ್ತಿದ್ದಾರೆ. ಉಳಿದವರು ಪದವಿ ಹೈಸ್ಕೂಲಿನಲ್ಲಿ ವ್ಯಾಸಂಗ ನಡೆಸಿದ್ದಾರೆ. ಈ ಎಲ್ಲ ಯಶಸ್ಸಿಗೆ ತಮ್ಮ ಆಶೀರ್ವಾದವೇ ಮೂಲಕಾರಣವೆಂದು ನಾನುತಿಳಿದಿದ್ದೇನೆ. ಶ್ರೀ ಗಳವರ ದಿವ್ಯ ಪಾದಕಮಲಗಳಿಗೆ ಮತ್ತೊಮ್ಮೆ ನಮಿಸಿ, ತಮ್ಮ ಆಶೀರ್ವಾದವನ್ನು ಬೇಡುವ ತಮ್ಮ ಬಾಲಕ.

(ಸಹಿ) ಗೋವಿಂದರಾಜು.

GOVINDARAJU, M.sc., L.L.B.,
Block Development officer (p),
Room No 35, Officers Hostel,
Administrative Training Institute,
Lalithmahal Road, Mysore - 11.

## ಏನಂತೀರಿ? ಮಹಾತ್ಮ — ದುರಾತ್ಮ

ರಸಿಕ ಪುತ್ತಿಗೆ, ೨ನೇ ಕ್ರಾಸ್, ಚನ್ನಪಟ್ಟಣ, ಬೆಂಗಳೂರು-ಜಿಲ್ಲೆ.

ಸಂಸ್ಕೃತದಲ್ಲಿ ಒಂದು ಚಮತ್ಕಾರ ಪೂರ್ಣ ಶ್ಲೋಕವಿದೆ. ಅದರ ಪದಾವಲಿ ಒಂದೇ ಆದರೂ ಹೇಳುವ ಧಾಟಿಯಿಂದ ಅರ್ಥ ಬದಲಾಯಿಸಿ ಬಿಡುತ್ತದೆ.

**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ**

ಇದು ಆ ಶ್ಲೋಕದ ಮೊದಲ ಭಾಗ ಇದರ ಅರ್ಥ ಮಹಾತ್ಮರಾದವರ ಮನಸ್ಸು ಮಾತುಕೃತಿಗಳು ಒಂದೇ ಆಗಿರುತ್ತವೆ. ಅದರಲ್ಲಿ ಭೇದವಿರುವುದಿಲ್ಲ, ಆಡಿದಂತೆ ಮಾಡುತ್ತಾರೆ, ಮಾಡಿದಂತೆ ಮನಸ್ಸಿನಲ್ಲಿಯೂ ಗ್ರಹಿಸುತ್ತಾರೆ ಎಂದರ್ಥ. ಉತ್ತರ ಭಾಗದಲ್ಲಿಯೂ ಅವೇ ಪದಗಳು ಬರುತ್ತವೆ.

**ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಂ**

ಇಲ್ಲಿ ಅರ್ಥ ಬೇರೆ ಬರುತ್ತದೆ. ಇಲ್ಲಿ ದುರಾತ್ಮರ ಮನಸ್ಸು ಒಂದು ತರವಾದರೆ ಮಾತು ಮತ್ತೊಂದು ತರ-ಕೃತಿ ಇನ್ನೊಂದು-ತರ ಎಂದು ಅರ್ಥ ಮಾಡಬೇಕು. ಹೇಳುವಾಗ ಮನಸ್ಯೇಕಂ ಅಂತ ಕೈ ಅಡಿಸಿದರೆ ಬೇರೆ ಎಂದು ತಿಳಿಸಿದರೆ ಅರ್ಥ ಬರುತ್ತದೆ. ವರ್ಚಸ್ಯೇಕಂ ಅಂತ ಕೈ ಆಡಿಸಿದರೆ ಬೇರೆ ಎಂದರ್ಥ ಆಗುತ್ತದೆ. ಹಾಗೇ ಕರ್ಮಣ್ಯೇಕಂ ಎಂದಾಗಲೂ ಕೂಡ, ಅಂದರೆ ದುರಾತ್ಮರು ಮಾತು ಆಡುವುದೊಂದಾದರೆ ಮಾಡುವುದು ಬೇರೆ ಮನಸ್ಸು ಬೇರೇ ಆಗಿರುತ್ತದೆ ಎಂದರ್ಥ ಇದಕ್ಕೆ ಸಮಾನವಾದ ಅರ್ಥದ ಬೇರೆ ಗಾದೆಗಳು ಕನ್ನಡದಲ್ಲಿ ಹಲವು ಇವೆ.

“**ಓದೋದು ಕಾಶೀ ಖಂಡ ತಿನ್ನೋದು ಮಸಿ ಕೆಂಡ**” “ಓದೋದು ಶಾಸ್ತ್ರ ಹಾಕೋದು ಗಾಳ” ಅಂತ, ಹಲವು ಸಿಗುತ್ತವೆ. ಇವೆಲ್ಲ ಬಂದಿರುವುದು ಮಾತಿಗೂ ಕೃತಿಗೂ ಭಿನ್ನರಾದ ಜನರನ್ನು ಕಂಡು, ಅಂಥವರು ಬಹಳ ಜನ ಸಿಗುತ್ತಾರೆ. ಜನರಿಗೆ ಉಪದೇಶ ಮಾಡುವ ಜನ ಹಿನ್ನಲೆಯಲ್ಲಿ ಹಾದರ ಮಾಡಿದರೆ? ನೀತಿ ಹೇಳುವ ಜನ ಅನೀತಿ ಮಾಡಿದರೆ? ಬುದ್ಧಿ ಹೇಳುವ ಜನ ಲದ್ದಿ ತಿಂದರೆ? ಅವರನ್ನು ದುರಾತ್ಮರೆಂದು ಹೇಳುವರು.

ಮಹಾ ಮಡಿವಂತನಂತೆ ಮೂಗಿನ ತುದಿಯಿಂದ ನೆತ್ತಿವರೆಗೆ ನಾಮ ಹಾಕಿ ಮಂತ್ರ ಪಠಿಸಿ ಮಡಿ ಮಡಿ ಅಂತ ಮಠದಲ್ಲಿ ಓಡಾಡುವವರು ಬೆಂಗಳೂರಿನ ಬಾರ್‌ಗಳಲ್ಲಿ ಮೂಗು ಹಿಡಿದು ಮೂರು ಪೆಗ್ ಹಾಕಿದರೆ? ಆ ನಾಟಕ ಯಾಕೆ? ತಿನ್ನುವುದಿದ್ದರೆ ನೇರಕ್ಕೆ ತಿನ್ನಲಿ ಕುಡಿಯುವುದಿದ್ದರೆ ನೇರಕ್ಕೆ ಕುಡಿಯಲಿ ಮಾಡುವುದಿದ್ದರೆ ನೇರಕ್ಕೆ ಮಾಡಲಿ ಈ ಹೆಪೊಕ್ರಸಿ ಯಾಕೆ?

ಗಾಂಧೀಜಿಯ ಜೀವನ ತೆರೆದ ಪುಸ್ತಕವಂತಿತ್ತು. ಅವರ ದಿನಚರಿ ಎಲ್ಲರಿಗೂ ನೋಡುವಂತಿತ್ತು. ಮುಚ್ಚುಮರೆ ಕಪಟ ಇರಲಿಲ್ಲ.

ಮಾಡುವ ಕೆಲಸ ಎದುರಿಗೆ ಸಮಾಜ ಸೇವೆ ಹಿಂಬದಿಗೆ ಮೋಸ ತಟವಟ ಅಂತಹವರನ್ನೇ ಮನಸ್ಯೈಕಂ ಅಂತ ಹೇಳಿ ದುರಾತ್ಮ ಎಂದದು ಇರಬೇಕು, ನಿಜ, ದೋಷರಹಿತನಾದ ಮನುಷ್ಯ ಖಂಡಿತ ಇಲ್ಲಿ ದೇವರು ಮಾತ್ರ ದೋಷರಹಿತ. ಇರುವ ದೋಷದ ಮೇಲೆ ಸಭ್ಯತೆಯ ತೆರೆ ಹಾಕಿಕೊಂಡು ಓಡಾಡುವುದು ಸರಿಯಲ್ಲ ಸಾಧ್ಯವಾದರೆ ಆರೋಪ ಕಡಿಮೆ ಮಾಡಿಕೊಳ್ಳಲಿ, ಅಥವಾ ಅದನ್ನು ಹಾಗೆ ಉಳಿಸಿ ಕೊಳ್ಳಲಿ. ವೇಷ ಬೇಡ ಬೂಟಾಟಿಕೆ ಬೇಡ ಮನಸ್ಯೈಕಂ ವಚಸ್ಯೈಕಂ ಎಂಬ ಮಹಾತ್ಮರಾಗುವ.

## ಗಾಳದ ಕನ್ನಪ್ಪ

ಬಸವ ಸಮಕಾಲೀನ ಗಾಳದ, ಕನ್ನಪ್ಪ
ಒಸೆದು ಮತ್ಸ್ಯವ ಹಿಡಿದು ವಿಕ್ರಯಿಪ ಧನದಿಂದ
ಅಸಮಾಕ್ಷ- ಭಕ್ತರನು ತೃಪ್ತಿಪಡಿಸುತಲಿದ್ದ
ಎಸೆವ ಪರ್ವವನೊಮ್ಮೆ ಮಾಡಲುಜ್ಜುಗಿಸಿದನು
ಶಿವಪೂಜೆ ಸಮಯದಲಿ ಬೇಡಿದನು ವರವೊಂದ
ಶಿವನು ಕರುಣಿಸಿದಂತೆ ಚಿನ್ನದಾ ಮೀನೊಂದು
ಭವಹರನ ಭಕ್ತನನು ಪರಿಕಿಸಲು ಸಿಕ್ಕಿತದು
ಶಿವಶರಣರನು ಬೇಡಿದನು ಪರ್ವಕಾಗಮಿಸೆ.

ಜಂಗಮರು ಕೋಪದಿಂ ದೂಡಿದರು ಕನ್ನನನು
"ಭಂಗಪಡುತಿಹ ಭವಿಯ ಕಾಯಕವ ನೆಸಗುತಿಹೆ"
ಹಂಗಿಸುತಲಿಂಕೆಂದು ಕಿತ್ತುಕಳುಹಿದರು ಶಿವ-
ಲಿಂಗವನೆ ಖಿನ್ನನಾಗಿಯೆ ಬಂದ ಕನ್ನಪ್ಪ
ಪೂಜೆಯಲಿ ನೋಡಿದರೆ ಅವರ ಲಿಂಗಗಳಿಲ್ಲ!
ಸಾಜದಿಂ ಕ್ಷಮೆ ಬೇಡಿ ಪಡೆದರವ ಕೆರೆಯಲ್ಲಿ !!

—ಕೆ. ಪಿ. ಶಿವಲಿಂಗಯ್ಯ.

# -: ಮೈ ಸೂ ರ ರ ಮ ನೆ :-

ಜೆ. ಬಿ. ಲಿಂಗರಾಜು, ಬಿ.ಎ. ಅಧ್ಯಾಪಕ, ಕಲ್ಲುಸಾದರಹಳ್ಳಿ,
ಬಾಣಾವಾರ – 573 112, ಹಾಸನ ಜಿಲ್ಲೆ.

ಬೆಳ್ಳಂ ಬೆಳಕು ಮೈಸೂರರಮನೆ
ನಾಡಿಗೆ ನಾಡಿಗೆ ಬಿಂಬಿಸಿದೆ
ಜಿರ್ರಂ ಜಿಗಿ ಜಿಗಿ ಶ್ರಾವಣಸೋನೆ
ಕಣ್ಮನ ತಣಿಸಿ ರಂಜಿಸಿದೆ!,

ಚಿನ್ನದ ಚಿಕ್ಕಿಯ ಗೋಪುರದಂದದಿ
ಕಲಶವದೆನಿಸಿದೆ ಕಂಗೊಳಿಸಿ ;
ಕನ್ನಡ ನಲ್ಮೆಯ ಬೆಳ್ಮುಗಿಲಂದದಿ
ಬೆಳಕಿನ ಹಂದರ ಶೋಭಿಸಿದೆ.

ಮೈಸೂರರಸರ ವೈಭವದರಮನೆ
ಕನ್ನಡ ನಾಡನು ಸ್ವಾಗತಿಸಿದೆ;
ಕೈಬೀಸುವ ತೆರದಿ-ಗಂಧದಕೆತ್ತನೆ
ಹರಳಿನ ಹಂದರ ಬಿಂಬಿಸಿದೆ.

ಬಣ್ಣಗಳೆನಿತೊ ಕಲೆಯುಲಿ ನಲಿದಿದೆ
ಮಯೂರನಾಟ್ಯದ ಕಲೆಯಾಗಿ,
ವರ್ಣವಿಧವಿಧ ಶಿಲೆತಾನುಲಿದಿದೆ
ಜೀವದ ಕಳೆಯ ಶಿಲೆಯಾಗಿ.



# ಕ್ಷೇತ್ರ ವಾರ್ತೆ

.... ಹೆಚ್. ಬಿ. ಗಂಗಾಧರಯ್ಯ

## ಗಾಂಧಿ ಜಯಂತಿ

ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿಸಂಘದ ಆಶ್ರಯದಲ್ಲಿ 2, ಅಕ್ಟೋಬರ್ ಬುಧವಾರ ಗಾಂಧಿ ಜಯಂತಿಯನ್ನು ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಆಚರಿಸಲಾಯಿತು. ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಕರ್ನಾಟಕ ರಾಜ್ಯದ ಬಾರ್ ಕೌನ್ಸಿಲ್ ಅಧ್ಯಕ್ಷರಾದ ಶ್ರೀ ಕೆ. ಎನ್. ರಾಜಶೇಖರ್ ಆಗಮಿಸಿದ್ದರು. ಈ ಸಂದರ್ಭದಲ್ಲಿ ಉಪನ್ಯಾಸ ಮಾಡುತ್ತಾ .... ....

ಮಹಾತ್ಮರು ನಡೆದ ದಾರಿಯಲ್ಲಿ ನಾವು ನಡೆದರೆ ಉತ್ತಮ ವ್ಯಕ್ತಿಗಳಾಗುತ್ತೇವೆ ಬುದ್ಧ-ಬಸವಣ್ಣನವರು ಬೋಧಿಸಿದ ಶಾಂತಿ, ಅಹಿಂಸೆ, ಕಾಯಕ, ಸಮಾನತೆ ಮುಂತಾದ ಆದರ್ಶಗಳನ್ನು ಮಹಾತ್ಮ ಗಾಂಧಿಯವರು ಆಚರಿಸಿ ತೋರಿಸಿದ್ದಾರೆ. ಇವರು ಮಾಡಿದ ತಪ್ಪುಗಳನ್ನು ತಿದ್ದಿಕೊಳ್ಳುವುದರಲ್ಲಿ ನಿಸ್ಸೀಮರಾಗಿದ್ದರು. ಅವರ ಜೀವನದರ್ಶನ ಕಣ್ಣು, ಕಿವಿ, ಬಾಯಿಗಳನ್ನು ಮುಚ್ಚಿಕೊಂಡಿರುವ ಮೂರು ಮಂಗಗಳ ಚಿತ್ರಗಳನ್ನು ಸದಾ ನಿರೂಪಿಸುತ್ತದೆ. ಕೆಟ್ಟದ್ದನ್ನು ನೋಡಬಾರದು, ಕೆಟ್ಟದ್ದನ್ನು ಕೇಳಬಾರದು, ಕೆಟ್ಟಮಾತುಗಳನ್ನು ನುಡಿಯಬಾರದು ಎಂಬುದು ಈ ತತ್ವ. ಇಂದಿನ ಯುವಕರು ಪ್ರಾಮಾಣಿಕರಾಗಿ ನಡೆದುಕೊಳ್ಳಬೇಕು. ಎಲ್ಲರ ಏಳಿಗೆಗಾಗಿ ಶ್ರಮಿಸಬೇಕು ಎಂಬುದೇ ಗಾಂಧೀಜಿಯವರ ಜೀವನ ಮಂತ್ರವಾಗಿತ್ತೆಂದು ಶ್ರೀ ರಾಜಶೇಖರ್ ನುಡಿದರು.

ವಿಶೇಷ ಆಹ್ವಾನಿತರಾಗಿದ್ದ ತುಮಕೂರಿನ ನಿವೃತ್ತ ಪಬ್ಲಿಕ್ ಪ್ರಾಸಿಕ್ಯೂಟರ್ ಶ್ರೀ ನಂಜುಂಡಪ್ಪನವರು ಮಾತನಾಡಿ 1934ರಲ್ಲಿ ಗಾಂಧೀಜಯವರು ತುಮಕೂರಿಗೆ ಬಂದಿದ್ದರು. ಅವರನ್ನು ನೋಡುವ ಭಾಗ್ಯ ಒದಗಿ ಬಂದದ್ದು ಪುಣ್ಯದ ಫಲವೆಂದು ಭಾವಿಸಿದ್ದೇನೆ. ಆ ಸಂದರ್ಭದಲ್ಲಿ ನಿರ್ಮಿಸಿದ್ದ ಎತ್ತರವಾದ ವೇದಿಕೆಯ ಮೇಲೆ ಅವರು ಕೂರಲು ಇಷ್ಟಪಡಲಿಲ್ಲ. ಎಲ್ಲರಂತೆ ನಾನೂ ಒಬ್ಬ ಸಾಮಾನ್ಯ ಪ್ರಜೆ ಎಂಬುದೇ ಅವರ ಉದಾತ್ತ ಭಾವನೆ. ಅವರು ಸಮತೆ, ಸಮಾನತೆಗೆ ಸಂಕೇತವಾಗಿದ್ದರು. ಅವರ ಭಕ್ತಿ ವಿಶ್ವಾಸಕ್ಕೆ ಮಣಿದು ದೇಶದ ಜನ ಲಕ್ಷೋಪಲಕ್ಷವಾಗಿ ಹಿಂಬಾಲಿಸುತ್ತಿತ್ತು. ಅವರ ಶ್ರಮದ ಫಲವಾಗಿ ದೇಶಕ್ಕೆ ಸ್ವಾತಂತ್ರ್ಯ ಬಂತು. ಆದರೆ ಇಂದು ದೇಶದ ಸ್ವಾತಂತ್ರ್ಯ ಸ್ವಾರ್ಥಿಗಳ ಶೋಷಣೆಗೆ ಸಿಕ್ಕಿದೆ. ಸ್ವಾತಂತ್ರ್ಯದ ಫಲ ಬಡಜನಗಳಿಗೆ ದೊರೆತಿಲ್ಲ. ಏಕೆ ಎಂಬುದು ಇಂದು ವಿಶ್ಲೇಷಿಸಬೇಕಾಗಿದೆ. ಗಾಂಧೀಜಿಯವರನ್ನು ನೆನಸಬೇಕಾದರೆ ಉತ್ತಮ ವ್ಯಕ್ತಿಗಳು ರಾಜಕೀಯ ಕ್ಷೇತ್ರ ಪ್ರವೇಶ ಮಾಡಬೇಕೆಂದು ಅಭಿಪ್ರಾಯಪಟ್ಟರು.

## ಶ್ರೀ ಶ್ರೀ ಗಳವರ ಆಶೀರ್ವಚನ॥

ಗಾಂಧೀಜಿಯವರ ಜೀವನ, ಸಾಧನೆ, ಸಿದ್ಧಿ, ಸೇವೆ ವರ್ಣನೆ ಮಾಡಲು ಸಾಧ್ಯವಿಲ್ಲ. ಅವರು ಮಹಾಮಾನವತಾವಾದಿಯಾಗಿದ್ದರು, ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ಮೇಲೆ ಹೋರಾಟ ಮಾಡಲು ಅವರು ಬಳಸಿದ ಅಸ್ತ್ರ ಭಾರತೀಯ ಸಂಸ್ಕೃತಿಯ ಹಿರಿಮೆ. ಇದರ ಮೌಲ್ಯಗಳು ಅವರನ್ನು ಆಗಾಗ್ಗೆ ಸ್ಮರಣೆ ತಂದುಕೊಟ್ಟು ಪ್ರಭಾವ ಬೀರುತ್ತಿದ್ದವು. ಇದರ ಪ್ರಯೋಗದಿಂದಲೇ ಜಯಲಭಿಸಿತು. ಅವರ ನಡೆ ನುಡಿಯಲ್ಲಿ ಏಕತೆ ಇತ್ತು. ಅವರ ಮಾತಿಗೆ ಎಲ್ಲರೂ ಓಗೊಡುತ್ತಿದ್ದರು.

ಬ್ರಿಟಿಷರಿಗೆ ಗಾಂಧೀಜಿಯ ಬಗ್ಗೆ ಪೂಜ್ಯಭಾವನೆ ಇತ್ತು. ವೈಸ್‌ರಾಯ್ ಮೌಂಟ್ ಬ್ಯಾಟನ್ ಸಭೆಯಲ್ಲಿ ಗಾಂಧೀಜಿ ಭಾಗವಹಿಸಿದ್ದರು. ಸಭೆಯು ಮುಗಿದ ನಂತರ ಮರೆತು ಗಾಂಧೀಜಿ ತಮ್ಮ ಬಳಿ ಇದ್ದ ತುಂಡು ಬಿಳಿ ಕಂಬಳಿ ಬಿಟ್ಟು ಮುಂದೆ ಸರಿದರು. ಆಗ ವೈಸ್‌ರಾಯ್ ಮೌಂಟ್‌ಬ್ಯಾಟನ್‌ರವರೇ ಕಂಬಳಿ ತೆಗೆದುಕೊಂಡು ಓಡುತ್ತಾ ಗಾಂಧಿಜೀಯನ್ನು ವಾತ್ಸಲ್ಯದಿಂದ ಕೂಗುತ್ತಾ ಕಂಬಳಿ ಹಿಂದಿರುಗಿಸಿದರು. ಇದು ಅವರ ವ್ಯಕ್ತಿತ್ವಕ್ಕೆ ಸಂದ ಅಪಾರಗೌರವ ಸೂಚಕವಾಗಿದೆ. ದೇವರು, ಧರ್ಮದ ಬಗ್ಗೆ ಅಪಾರ ಭಕ್ತಿ ಇತ್ತು. ಹಿಂಸೆಯನ್ನು ಅಹಿಂಸೆಯಿಂದ ಗೆಲ್ಲಬೇಕು. ಅಸತ್ಯವನ್ನು ಸತ್ಯದಿಂದ ಗೆಲ್ಲಬೇಕೆಂಬುದೇ ಅವರ ಧ್ಯೇಯವಾಗಿತ್ತು. ಕಷ್ಟಗಳಿಗೆ ಹಿಂಜರಿಯುವ ವ್ಯಕ್ತಿಯಾಗಿರಲಿಲ್ಲ, ಜಗತ್ತು ಶಾಂತಿಯಿಂದರಬೇಕಾದರೆ ಧರ್ಮದ ಮೂಲವನ್ನು ಅರಿಯಬೇಕೆಂದು ಪ್ರತಿಪಾದಿಸಿದ್ದಾರೆ.

## ರಾಮ ರಾಜ್ಯ ಸ್ಥಾಪನೆ ಅವರ ಉದ್ದೇಶ

ಎಲ್ಲರೂ ಏಳಿಗೆ ಯಾಗಬೇಕು. ಎಲ್ಲರಲ್ಲಿ ಮಾನವೀಯ ಮೌಲ್ಯಗಳ ಬೆಳವಣಿಗೆ ಯಾಗಬೇಕು. ಶ್ರೀ ರಾಮತೀರ್ಥರು ನಾಲ್ಕುವರ್ಗಗಳಾಗಿ ಮಾನವರನ್ನು ವಿಂಗಡಿಸಿದ್ದಾರೆ.

1) ಶಿಲಾವರ್ಗ :- ನಾನು ................ ನನ್ನ ಏಳ್ಗೆ.

2) ಸಸ್ಯವರ್ಗ :- ನಾನು ................ ನನ್ನ ಕುಟುಂಬಪಾಲನೆ.

3) ಪ್ರಾಣಿವರ್ಗ :- ನಾನು ................ ನನ್ನ ಪಕ್ಕದವರು.

4) ಮನುಷ್ಯವರ್ಗ ;- ನಾನು ................ ನನ್ನ ದೇಶ ಚೆನ್ನಾಗಿರಬೇಕು.

ಇವನ್ನುಹೊರತು ಪಡಿಸಿ ದೇವವರ್ಗ ಒಂದು ಇದೆ. ಇದರ ಧ್ಯೇಯ ನಾನು, ಜಗತ್ತೆಲ್ಲವೂ ಚೆನ್ನಾಗಿರಬೇಕು. ಗಾಂಧೀಜಿಯ ಜೀವನ ದರ್ಶನ ಸರಳ ಜೀವನಕ್ಕೆ ಪ್ರತೀಕವಾಗಿದ್ದು ದೇವ ವರ್ಗದ ವ್ಯಾಪ್ತಿಗೆ ಒಳಪಟ್ಟಿತ್ತು. ಆರ್ಥಿಕವಾಗಿ ಭರತಖಂಡ ಚೆನ್ನಾಗಿ ಬೆಳವಣಿಗೆಯಾಗಬೇಕು. ಸಾಮಾಜಿಕವಾಗಿ ಅಸ್ಪೃಶ್ಯತಾ ನಿವಾರಣೆಗಾಗಿ ಬಹಳವಾಗಿ ಶ್ರಮಿಸಿದರು. ಸ್ವಾತಂತ್ರ್ಯ ನಂತರ ಭಾರತ ಜಗತ್ತಿಗೆ ಮಾರ್ಗದರ್ಶನ ಮಾಡಬೇಕೆಂಬ ಹಂಬಲ ಅವರಿಗಿತ್ತು. ಆದರೆ ಈ ದಿನದ ಚಿತ್ರ ಲಜ್ಜಾಸ್ಪದವಾಗಿದೆ.

ಪ್ರಜಾಪ್ರಭುತ್ವ ಎಲ್ಲರ ಪ್ರಗತಿಯ ಸಂಕೇತ, ಎಲ್ಲರೂ ಬುದ್ಧಿವಂತರಾಗಿ ನೀತಿಯುತವಾದ ಬಾಳ್ವಿಕೆ ನಡೆಸಬೇಕು. ಆದರೆ ಇಂದು ದ್ರೋಹ ಬಗೆಯುತ್ತಿದ್ದೇವೆ. ಪ್ರತಿಭಟನೆ ಮಾಡುವವರಿಲ್ಲ. ಶಿಕ್ಷಕರು ಮನಸ್ಸುಮಾಡಿದರೆ ಬದಲಾವಣೆ ತರಬಹುದು. ಬಸವಣ್ಣನವರ ತತ್ವಗಳನ್ನು ಗಾಂಧೀಜಿ ಸಂಪೂರ್ಣವಾಗಿ ಆಚರಿಸಿ ತೋರಿಸಿದ್ದಾರೆ.

## ಅಭಿನಂದನೆ :

ಕರ್ನಾಟಕ ರಾಜ್ಯಬಾರ್ ಕೌನ್ಸಿಲ್ ಅಧ್ಯಕ್ಷ ಸ್ಥಾನಕ್ಕೆ ಶ್ರೀ ಕೆ. ಎನ್. ರಾಜಶೇಖರ್‌ರವರ ಅವಿರೋಧ ಆಯ್ಕೆ ಅವರ ಬಹುಮುಖ ವ್ಯಕ್ತಿತ್ವಕ್ಕೆ ದೊರೆತಪುರಸ್ಕಾರ.

ಶ್ರೀಯುತರಿಗೆ ಅಭಿನಂದನ ಸಮಾರಂಭವನ್ನು ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆ ತುಮಕೂರಿನ ಸಿದ್ಧಗಂಗಾ ಎಸ್. ಐ. ಟಿ. ಬಿರ್ಲಾ ಆಡಿಟೋರಿಯಂನಲ್ಲಿ ಆಕ್ಟೋಬರ್ 5 1991ನೇ ಶನಿವಾರ ಏರ್ಪಡಿಸಿತ್ತು. ಸಮಾರಂಭ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು.

ಸಮಾರಂಭದ ಅಧ್ಯಕ್ಷತೆಯನ್ನು ಕರ್ನಾಟಕದ ಉಚ್ಚನ್ಯಾಯಾಲಯದ ಗೌರವಾನ್ವಿತ ನ್ಯಾಯಾಧೀಶರಾದ ಶ್ರೀ ಎಂ. ರಾಮಾಜೋಯಿಸ್ ವಹಿಸಿದ್ದರು. ಮುಖ್ಯ ಅತಿಥಿಯಾಗಿ ರಾಷ್ಟ್ರೀಯ ನ್ಯಾಯಾಶಾಲೆ ಭಾರತ ವಿದ್ಯಾಲಯ, ಬೆಂಗಳೂರು ಇದರ ನಿರ್ದೇಶಕರಾದ ಡಾ|| ಶ್ರೀ ಎಸ್. ಆರ್. ಮಾಧವ ಮೆನನ್ ಆಗಮಿಸಿದ್ದರು.

ಪ್ರಾರಂಭಕ್ಕೆ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಸಹ ಕಾರ್ಯದರ್ಶಿಗಳಾದ ಶ್ರೀ ಟಿ. ಕೆ. ನಂಜುಂಡಪ್ಪನವರು ಸ್ವಾಗತ ಕೋರಿದರು. ಬೆಂಗಳೂರು ಉಚ್ಚನ್ಯಾಯಾಲಯದ ವಕೀಲರಾದ ಶ್ರೀ ವೀರಭದ್ರಪ್ಪನವರು ಪರಿಚಯಿಸಿದರು. ಶ್ರೀ ಬಸವೇಶ್ವರ ಶಿಕ್ಷಕ ತರಬೇತಿ ಸಂಸ್ಥೆಯ ವಿದ್ಯಾರ್ಥಿ-ಶಿಕ್ಷಕರು ಸಾಮೂಹಿಕವಾಗಿ ಗಾಂಧಿಸ್ತುತಿಯನ್ನೊಳಗೊಂಡ ದೇಶ ಭಕ್ತಿಗೀತೆಗಳನ್ನು ಹಾಡಿದರು.

ತುಮಕೂರು ಜಿಲ್ಲಾ ಸೆಷನ್ ಶ್ರೇಷ್ಠನ್ಯಾಯಾಧೀಶರಾದ ಶ್ರೀ ಅಗ್ನಿಹೋತ್ರಿ, ನ್ಯಾಯವಾದಿಗಳಾದ ಶ್ರೀ ಗರುಡಾಚಾರ್, ಕೈಗಾರಿಕೋದ್ಯಮಿಗಳಾದ ಶ್ರೀ ಎನ್. ಆರ್. ಜಗದೀಶ್ ಮತ್ತು ಪ್ರಮುಖ ವ್ಯಾಪಾರಿಗಳಾದ ಶ್ರೀ ಟಿ. ಎಲ್. ಲಕ್ಷ್ಮೀನಾರಾಯಣಶೆಟ್ಟಿ ಶ್ರೀ ಕೆ.ಎನ್. ರಾಜಶೇಖರ್‌ರವರ ಬಗ್ಗೆ ಶ್ಲಾಘನೆಮಾಡಿದರು.

ಶ್ರೀ ಮೆನನ್‌ರವರು ಮಾತನಾಡಿ ಕಾನೂನು ಶಿಕ್ಷಣದಲ್ಲಿ ತುಂಬಾ ಸುಧಾರಣೆಯಾಗಬೇಕಾಗಿದೆ, ನ್ಯಾಯವಾದಿಗಳು ಇಂದು ತೀವ್ರವಾಗಿ ಸಮಸ್ಯೆಗಳನ್ನು ವಿಮರ್ಶಿಸಿ ಅಭಿಪ್ರಾಯಗಳನ್ನು ನೀಡಬೇಕು. ಈ ದಿಶೆಯಲ್ಲಿ ನೂತನವಾಗಿ ಆಯ್ಕೆಯಾಗಿರುವ ಶ್ರೀ ಕೆ. ಎನ್. ಆರ್‌ರವರು ಶ್ರಮಿಸಬೇಕಾಗಿದೆ ಎಂದರು.

ಈ ಸಂದರ್ಭದಲ್ಲಿ ಶ್ರೀ ಕೆ. ಎನ್. ಆರ್‌ರವರು ಮಾತನಾಡಿ ನನ್ನ ಎಲ್ಲಾ ಅಭ್ಯುದಯ ಬೆಳವಣಿಗೆಗೆ ಪೂಜ್ಯ ಗುರುಗಳಾದ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಆಶೀರ್ವಾದದ ಫಲ. ದೀನ, ದಲಿತರ ಕೇಂದ್ರವಾಗಿ ಶ್ರೀ ಸಿದ್ಧಗಂಗಾಮಠ

ಭಾರತದಲ್ಲಿ ಸರ್ವರ ಹಿತಕ್ಕಾಗಿ ಶ್ರಮಿಸುತ್ತಿದೆ. ತುಮಕೂರಿನ ಸಿದ್ಧಗಂಗಾ ಪ್ರೌಢ ಶಾಲೆಯ ವಿದ್ಯಾರ್ಥಿಯಾಗಿ ಜೀವನದಲ್ಲಿ ಸ್ಫೂರ್ತಿ ಪಡೆದೆ ಎಂದು ಸ್ಮರಿಸಿದರು.

ಅತಿಥಿಗಳಾದ ಶ್ರೀ ರಾಮಾಜೋಯಿಸ್‌ರವರು, ಶ್ರೀ ಶ್ರೀಗಳವರ ಸನ್ನಿಧಿಯಲ್ಲಿ, ಶ್ರೀ ಕೆ.ಎನ್.ಆರ್‌ರವರಿಗೆ ಸನ್ಮಾನ ದೊರೆತದ್ದು ಅವರ ಪುಣ್ಯ ಫಲದ ಸಂಕೇತ.

ಸೇವೆ ಮತ್ತು ತ್ಯಾಗಕ್ಕೆ ಹೆಸರಾಂತ ಶ್ರೇಷ್ಠ ವ್ಯಕ್ತಿಗಳಾದ ಶ್ರೀ ಶ್ರೀ ಗಳವರ ಸನ್ನಿಧಿಯಲ್ಲಿ ಸೇರುವುದೇ ಪುಣ್ಯ ಮತ್ತು ಅಪೂರ್ವ. ಈ ಸುಂದರಸಂಜೆಯು ನನ್ನ ಮೇಲೆ ವಿಶೇಷ ಪ್ರಭಾವಬೀರಿದೆ. ವಕೀಲರ ಪರಿಷತ್ ಪ್ರಾಮುಖ್ಯವಾದುದು. ಕರ್ನಾಟಕದಲ್ಲಿ 18,00 0ವಕೀಲರಿದ್ದಾರೆ, ಇವರಿಗೆ ಮಹತ್ವದ ಜವಾಬ್ದಾರಿಇದೆ. ಇಂದು ನೈತಿಕ ಅದಃ ಪತನವಾಗಿದೆ. ದೇಶ ಸರ್ವನಾಶದ ಅಂಚಿನಲ್ಲಿದೆ. ವಕೀಲರು ಇದರ ಬಗ್ಗೆ ಗಮನ ಹರಿಸಬೇಕು. ಕಾನೂನು ಶಿಕ್ಷಣ ಅಧೋಗತಿಗೆ ಇಳಿದಿದೆ. ವಿದ್ಯೆ ಸುಲಭವಾಗಿ ಕಲಿಯಲು ಸಾಧ್ಯವಿಲ್ಲ. ಕಾಪಿ ಮಾಡಿ ಇಂದು ಪದವಿಗಳನ್ನುಗಳಿಸುತ್ತಿದ್ದಾರೆ. ಇದರಿಂದಾಗಿ ಶಿಕ್ಷಣ ಕ್ಷೇತ್ರ ಕುಸಿಯುತ್ತಿದೆ. ಹಣ ಸಂಪಾದಿಸಬಹುದು, ಆದರೆ ವಿದ್ಯೆಯನ್ನು ಶ್ರಮಪಟ್ಟು ಸಾಧನೆ ಮಾಡಬೇಕು. ಜೀವನದಲ್ಲಿ ಮುಖ್ಯವಾಗಿ ನಾಲ್ಕು ಋಣಗಳಿವೆ. ಮಾತಾಪಿತೃ ಋಣ, ಋಷಿ ಋಣ, ಮನುಷ್ಯ ಋಣ, ದೇವರ ಋಣ. ಶ್ರಿ ಕೆ.ಎನ್.ಆರ್‌ವರು ಎಲ್ಲಾ ಋಣಗಳನ್ನು ತೀರಿಸಿರುವ ವ್ಯಕ್ತಿಗಳಾಗಿದ್ದಾರೆಂದು ಅಭಿನಂದಿಸಿದರು.

### ಶ್ರೀ ಶ್ರೀ ಗಳವರ ಆಶೀರ್ವಚನ

ಈ ಸಮಾರಂಭ ನಾಡಿನ ರಾಷ್ಟ್ರದ ಸಮಸ್ಯೆಗಳನ್ನು ಪರಿಹಾರ ಮಾಡುವುದಾಗಿದೆ. ಇಂದು ಸಾಮಾಜಿಕ ಜೀವನ ಕಲುಷಿತವಾಗಿದೆ ದಾನವ ಜೀವನ ಸಾಗುತ್ತಿದೆ. ಎಲ್ಲಾ ಜನಾಂಗಕ್ಕೂ ನಮ್ಮ ಭಾರತ ಬೆಳಕು ಹರಿಸಿದೆ. ಈಕಾರ್ಯ ಸಾಧಿಸುವಲ್ಲಿ

ವಕೀಲರಪಾತ್ರ ಮುಖ್ಯ. ವೃತ್ತಿ ಗೌರವ ಘನತೆ ಉಳ್ಳವರಾಗಿ ಸೇವೆಯಲ್ಲಿ ತೊಡಗಬೇಕು. ವಿಷಯದಲ್ಲಿ ಪ್ರಭುತ್ವವಿರಬೇಕು. ಆದರೆ ಇಂದು ಪದವಿ ದೊರಕಿಸಿ ಕೊಳ್ಳುವುದರಲ್ಲೇ ಆಸಕ್ತರಾಗಿದ್ದಾರೆ. ಜ್ಞಾನ ಗಳಿಸುವಲ್ಲಿ ಅಲ್ಲ. ಒಬ್ಬ ಡಾಕ್ಟರ್ ತನ್ನ ವೃತ್ತಿಯಲ್ಲಿ ತಪ್ಪುಮಾಡಿದರೆ ಒಬ್ಬ ವ್ಯಕ್ತಿ ಸಮಾಧಿಯಾಗುತ್ತಾನೆ. ಆದರೆ ವಕೀಲ ತಪ್ಪುಮಾಡಿದರೆ ಇಡೀ ದೇಶವೇ ಸಮಾಧಿಯಾಗುತ್ತದೆ. ಕಾನೂನು ವಿದ್ಯೆ ಪರಿಷ್ಕರಣವಾಗಬೇಕು. ಶಾಸನ ಮತ್ತು ಕಾನೂನುಗಳು ದೇಶದ ರಕ್ಷಣೆಯ ಬೇಲಿಗಳಾಗಬೇಕೇ ಹೊರತು ಭಕ್ಷಣೆಯ ಮಳಿಗೆಗಳಾಗಬಾರದು.

ಹಳ್ಳಿಯಲ್ಲಿ ಜನ್ಮತಾಳಿ ಸಾಧಕ ಜೀವಿಯಾಗಿ ಕೆಲಸ ಮಾಡಿದ್ದಾರೆ ಕೆ.ಎನ್.ಆರ್. ನಾಡಿಗೆ ರಾಷ್ಟ್ರಕ್ಕೆ ಅವರು 2ವರ್ಷದ ಅವಧಿಯಲ್ಲಿ ಉತ್ತಮ ಸೇವೆ ಸಲ್ಲಿಸಲು ಅವರಿಗೆ ಸರ್ವಶಕ್ತಿಯನ್ನು ಪರಮಾತ್ಮ ನೀಡಲಿ ಎಂದು ಅನುಗ್ರಹಿಸಿದರು. ಕೊನೆಯಲ್ಲಿ ರೀಡರ್ ಶ್ರೀ ಹೆಚ್. ವಿ. ವೀರಭದ್ರಯ್ಯನವರು ವಂದನೆ ಸಲ್ಲಿಸಿದರು.

[illegible] ಕೇವಲ 365 ದಿನಗಳಲ್ಲಿ :-

ತನ್ನ ಪ್ರಜೆಗಳ ಪ್ರಗತಿ ಮತ್ತು ಮುನ್ನಡೆಗಾಗಿ ಬದ್ಧವಾಗಿರುವ ಸರ್ಕಾರ
ಂದಕ್ಕೆ ಯಾವುದೇ ಪ್ರಯತ್ನವು ಕಷ್ಟವಲ್ಲ. ಯಾವುದೇ ಕೆಲಸವು ದೊಡ್ಡದಲ್ಲ. ಇಂದು
ರ್ನಾಟಕ ಸರ್ಕಾರವು ಶ್ರೀ ಬಂಗಾರಪ್ಪನವರ ನೇತೃತ್ವದಲ್ಲಿ, ತನ್ನ ಸಾಧನೆಗಳತ್ತ ಒಮ್ಮೆ
ಮ್ಮೆಯಿಂದ ಸಿಂಹಾವಲೋಕಿಸುತ್ತಿದೆ.

ಪ್ರಾಥಮಿಕ ಶಿಕ್ಷಣಕ್ಕೊಂದು ಉತ್ತೇಜನ, ಬೇಸಾಯಗಾರರಿಗೊಂದು ಅಮೂಲ್ಯ
ಧಿ ಮತ್ತು ನೀರಾವರಿಗೊಂದು ಅಭೂತಪೂರ್ವ ಆದ್ಯತೆಯತ್ತ ಇಂದು ಸರ್ಕಾರ
ದ್ಧವಾಗಿದೆ. ಈ ದಿಶೆಯತ್ತ ದಿಟ್ಟ ಹೆಜ್ಜೆ ಇಟ್ಟಿದೆ. ಕೋಮು ಗಲಭೆಗಳನ್ನು ಮತ್ತು
ಪರಾಧಗಳನ್ನು ಹತ್ತಿಕ್ಕಲು ಸರ್ಕಾರವು ಕ್ರಮ ಕೈಗೊಂಡಿದೆ. ಗಲಭೆಗಳನ್ನು ತಡೆವ
ಲುವಾಗಿ ರಾಜ್ಯ ಏಕತಾ ಸಮಿತಿಯೊಂದನ್ನು ರಚಿಸಲಾಗಿದೆ.

## ಬಡ ಜನತೆಗಾಗಿ ಅರ್ಥಪೂರ್ಣ ಸುಧಾರಣಾ ಯೋಜನೆಗಳು

**ಶುಶ್ರೂಷಾ :-** ಗ್ರಾಮೀಣ ಜನತೆಗೆ ಪ್ರತಿ 6 ತಿಂಗಳಿಗೊಮ್ಮೆ ಉಚಿತ ವೈದ್ಯಕೀಯ
ಪಾಸಣೆ ದುಬಾರಿ ಚಿಕಿತ್ಸೆ ನಡೆಸಬೇಕಾಗುವ ರೋಗಗಳ ಗುರುತಿಸುವಿಕೆ ಮತ್ತು
ಕಿತ್ಸೆ ನೀಡುವ ಯೋಜನೆಯೇ ಈ ಶುಶ್ರೂಷಾ. ಈ ಯೋಜನೆಯಿಂದ ಬಡಜನರೂ
ೂಡ ಬೇರಾವುದೇ ಜನರಂತೆ ಅವರ ಜೀವನ ಅಮೂಲ್ಯವೆಂಬಂತೆ ಆದ್ಯತೆ ಪಡೆಯಲು
ಸಾಧ್ಯವಾಗುತ್ತದೆ.

**ಆರಾಧನಾ :-** ಜನರಲ್ಲಿ ಧಾರ್ಮಿಕ ಭಾವನೆಯನ್ನು ಈ ಯೋಜನೆಯು ಬಲಪಡಿಸುತ್ತದೆ.
ರ್ಬಲ ಜನಾಂಗಗಳ ಜನತೆಯಿರುವೆಡೆ ಅವಶ್ಯಕತೆಗಳನ್ನು ಪೂರೈಸುವ ಸದುದ್ದೇಶ
ಂದ ಅವರು ವಾಸಿಸುವ ಸ್ಥಳಗಳಲ್ಲಿಯೇ ನಿರ್ಮಿಸಲು ಈ ಯೋಜನೆಯನ್ನು ಹಮ್ಮಿ
ಕೊಳ್ಳಲಾಗಿದೆ,

**ಕ್ಷ :-** ಗ್ರಾಮೀಣ ಗುಡಿ ಕೈಗಾರಿಕೀಕರಣವನ್ನು ಮೇಲೆತ್ತಲು ಸಾವಿರಾರು ಗ್ರಾಮೀಣ
ಜನತೆಗೆ ಸತತ ಮತ್ತು ಲಾಭಯುತ ಉದ್ಯೋಗವನ್ನೀಯುವ ಉದ್ದೇಶದಿಂದ ಈ
ಕಾರ್ಯಕ್ರಮವನ್ನು ಯೋಜಿಸಿದೆ. ಕಚ್ಚಾ ಸಾಮಾಗ್ರಿಗಳ ಪೂರೈಕೆ, ಉತ್ಪನ್ನಗಳ
ಮಾರಾಟ ಮತ್ತು ಕೌಶಲ್ಯವರ್ಧನೆ ಇತ್ಯಾದಿಗಳಿಗೆ ಸರ್ಕಾರದ ಪೂರ್ಣ ಬೆಂಬಲವಿದೆ.

**ಆಶ್ರಯ :-** ಅನುಸೂಚಿತ ಜಾತಿಯ ಮತ್ತು ಕೋಮಿನವರಿಗೆ ಇದೇ ವರ್ಷ ರಾಜ್ಯದ
ಪ್ರತಿಯೊಂದು ತಾಲ್ಲೂಕುಗಳಲ್ಲಿ 1000 ಗೃಹಗಳನ್ನು ಮತ್ತು 5 ವರ್ಷ 1 ಲಕ್ಷ ಗೃಹ
ನ್ನೊದಗಿಸಲು ಈ ಹಿರಿದಾದ ಯೋಜನೆಯನ್ನು ಹಾಕಿಕೊಂಡಿದೆ.

**ಅಕ್ಷಯ :-** ಸಮಾಜದ [illegible] ಹಿಂದುಳಿದ ಬಡಮಕ್ಕಳಿಗೆ ಒಂದು ಹೊತ್ತಾದರೂ
ಪೌಷ್ಟಿಕ ಆಹಾರವನ್ನು ನೀಡಲು ಇದೊಂದು ಮಾನವೀಯ ಕಾರ್ಯಕ್ರಮ. ಎಳೆ
ವಯಸ್ಸಿನವರಾದರೂ ಮಕ್ಕಳು ಶಾಲೆಗೆ ಬರಲು ಇದೊಂದು ಪ್ರೇರಣೆ

**ಇನ್ನೂ ಹೆಚ್ಚಿನದು ಮುಂಬರುವ ವರ್ಷಗಳಲ್ಲಿ :-** ಈ ದಿನದಂದು ನಾನು ಕರ್ನಾಟಕ
ಜನತೆಗೆ ಅವರ ಪೂರ್ಣ ಹೃದಯದ ಸಹಕಾರಕ್ಕಾಗಿ ಪೂರ್ಣ ಹಂಬಲದಿಂದ ಸಾಧ್ಯವಾದ.
ಸರ್ಕಾರದ ಈ ಹಿಂದಿನ ವರ್ಷದ ಪ್ರಗತಿ ಪೂರ್ಣ ಹಾದಿಯಲ್ಲಾದ ಅನೇಕ ಸುಧಾರಿತ
ಕಾರ್ಯಗಳನ್ನು ಸಾಧ್ಯಮಾಡಿದ್ದಕ್ಕಾಗಿ, ನಾನು ಅವರಿಗೆ ಆಭಾರಿಯಾಗಿದ್ದೇನೆ.

“ಕರ್ನಾಟಕ ವಾರ್ತೆ”
: 151091.

ಶ್ರೀಯುತ ಎಸ್. ಬಂಗಾರಪ್ಪ,
ಕರ್ನಾಟಕದ ಮುಖ್ಯ ಮಂತ್ರಿಗಳು

# ಸಿದ್ಧಗಂಗಾ

ಸಂಪುಟ–27. ಸಂಚಿಕೆ–12 ಡಿಸೆಂಬರ್–1991.

ರಾಷ್ಟ್ರವನ್ನಾಳುವ ನಾಯಕರಿಗೆ ಹೃದಯವಂತಿಕೆ ಇರಬೇಕು.
ತನ್ನ ಜನರ ಕಷ್ಟಕಾರ್ಪಣ್ಯಗಳಿಗೆ ಸ್ಪಂದಿಸುವ ಮನೋಧರ್ಮ
ಮೂಡಿಬರಬೇಕು. ಮಾನವೀಯತೆಯೊಡಗೂಡಿದ ಜೀವ
ಕ್ರಮ ಅವರದಾದಾಗ ಜನಾಂಗ ಸಂಕಟದಿಂದ
ದೂರವಾಗಬಲ್ಲುದು.

— ಶ್ರೀ ಶ್ರೀ ಶಿವಕುಮಾರಸ್ವಾಮಿಗಳು

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ
ಸಿದ್ಧಗಂಗಾ ಕ್ಷೇತ್ರ.



ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಂದ ಪದ್ಮ ಶ್ರೀ ಆರ್. ಎಂ.ಬಿ. ಆರಾಧ್ಯರ ಪ್ರತಿಷ್ಠಾನದ ಆರಂಭೋತ್ಸವ. ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯರು, ಶ್ರೀ ಬಿ. ಎಸ್. ಮುದ್ದಪ್ಪನವರು ಶ್ರೀ ಗೊ.ರು. ಚನ್ನಬಸಪ್ಪನವರುಗಳನ್ನು ಕಾಣಬಹುದು.



ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಸಮ್ಮುಖದಲ್ಲಿ ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯರಿಗೆ ಪ್ರತಿಷ್ಠಾನದ ಕೋಶಾಧಿಕಾರಿಗಳಾದ ಶ್ರೀ ಎಚ್. ವಿ. ನಾಗೇಂದ್ರಪ್ಪನವರಿಂದ ಬಸವಣ್ಣನವರ ನೆನಪಿನ ವಿಗ್ರಹವನ್ನು ಅರ್ಪಣೆ ಮಾಡುತ್ತಿರುವುದು.